ಕಾಯಕವೇ ಕೈಲಾಸ



# ಸಿದ್ಧಗಂಗಾ



ಸಂಪುಟ : ೫೧ ಸೆಪ್ಟೆಂಬರ್ ೨೦೧೫ ಸಂಚಿಕೆ : ೦೯




ಶ್ರೀ ಸಿದ್ಧಗಂಗಾ ಸನಿವಾಸ ವಿದ್ಯಾಸಂಸ್ಥೆಗಳ 2015–16ನೇ ಸಾಲಿನ ಸಂಯುಕ್ತ ವಿದ್ಯಾರ್ಥಿ ಸಂಘದ ಉದ್ಘಾಟನಾ ಸಮಾರಂಭದ ಉದ್ಘಾಟನೆಯನ್ನು ಮಾಡಿದ ಕರ್ನಾಟಕ ಸರ್ಕಾರದ ಸಮಾಜ ಕಲ್ಯಾಣ ಸಚಿವರಾದಂತಹ ಸನ್ಮಾನ್ಯ ಶ್ರೀ ಹೆಚ್. ಆಂಜನೇಯರವರಿಗೆ ಪರಮಪೂಜ್ಯ ಶ್ರೀಗಳವರೀರ್ವರಿಂದ ಸನ್ಮಾನ. ತುಮಕೂರು ಮಹಾನಗರ ಪಾಲಿಕೆ ಮಹಾಪೌರರಾದ ಶ್ರೀಮತಿ ಲಲಿತಾ ರವೀಶ್ ಮತ್ತಿತರರು ಉಪಸ್ಥಿತರಿದ್ದರು.




ಶ್ರೀ ಸಿದ್ಧಗಂಗಾ ಸನಿವಾಸ ವಿದ್ಯಾಸಂಸ್ಥೆಗಳ ಸಂಯುಕ್ತ ವಿದ್ಯಾರ್ಥಿ ಸಂಘದ ವತಿಯಿಂದ ನಡೆದ 69ನೇ ಸ್ವಾತಂತ್ರ್ಯೋತ್ಸವ ಸಮಾರಂಭದಲ್ಲಿ ಕರ್ನಾಟಕ ಸರ್ಕಾರದ ಕಾನೂನು ಮತ್ತು ಸಂಸದೀಯ ವ್ಯವಹಾರ ಸಚಿವರಾದ ಸನ್ಮಾನ್ಯ ಶ್ರೀ ಟಿ.ಬಿ. ಜಯಚಂದ್ರರವರು, ತುಮಕೂರು ಜಿಲ್ಲಾ ಪ್ರಭಾರ ಜಿಲ್ಲಾಧಿಕಾರಿಗಳಾದ ಶ್ರೀಮತಿ ಡಾ. ಅನುರಾಧರವರು ಹಾಗೂ ತುಮಕೂರು ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳಾದ ಶ್ರೀ ಕಾರ್ತಿಕ್‌ರೆಡ್ಡಿಯವರು ಉಪಸ್ಥಿತರಿದ್ದರು.




ಪೈ ಇಂಟರ್‌ನ್ಯಾಷನಲ್ ಎಲೆಕ್ಟ್ರಾನಿಕ್ಸ್ ಲಿ., ಮಾಲೀಕರಾದ ಶ್ರೀ ರಾಜ್‌ಕುಮಾರ್ ಪೈ ಮತ್ತು ಶ್ರೀಮತಿ ಮೀನಾ ರಾಜಕುಮಾರ್ ಪೈ ಇವರ ವತಿಯಿಂದ ಶ್ರೀಮಠದ ಎಲ್ಲಾ ವಿದ್ಯಾರ್ಥಿಗಳಿಗೆ ಒಟ್ಟು 55,000 ಉಚಿತ ನೋಟ್‌ಪುಸ್ತಕಗಳನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳವರ ಅಮೃತಹಸ್ತದಿಂದ ವಿತರಿಸಲಾಯಿತು.



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೫೧ ಸೆಪ್ಟೆಂಬರ್ ೨೦೧೫ ಸಂಚಿಕೆ : ೯

ಒಳಪುಟಗಳಲ್ಲಿ ..................




ಚಂದಾ ವಿವರ : ವಾರ್ಷಿಕ ಚಂದಾ ರೂ. ೨೦೦/-
ಆಜೀವ ಸದಸ್ಯತ್ವ ರೂ. ೧೫೦೦/- ಬಿಡಿ ಪ್ರತಿ ರೂ. ೧೨.೦೦





ಸಂಪಾದಕರು :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕರು :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕರು :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ

ವಿತರಕರು :
ಆರ್.ಎಸ್. ಮಲ್ಲೇಶಪ್ಪ

ಛಾಯಾ ಚಿತ್ರಗಳು :
ಬಿ.ಸಿ. ಸುರೇಶ್

ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.

ವಿಳಾಸ :
'ಸಂಪಾದಕರು'
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್
ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು – ೫೭೨ ೧೦೪.


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ

# ಕಣ್ಮರೆಯಾದ ಇಬ್ಬರು ಘನವಿದ್ವಾಂಸರು

ದಿನಾಂಕ ೩೦-೦೮-೨೦೧೫ರ ಬೆಳಿಗ್ಗೆ ೮.೩೦ರ ಸಮಯ ಕನ್ನಡ ಸಂಶೋಧನಾ ಕ್ಷೇತ್ರಕ್ಕೆ ಬರಸಿಡಿಲಿನಂತೆ ಬಂದೆರಗಿದ್ದು ಬಹು ದೊಡ್ಡ ಆಘಾತ. ಧಾರವಾಡದ ಕಲ್ಯಾಣನಗರದ 'ಸೌಜನ್ಯ'ದಲ್ಲಿ ಡಾ. ಎಂ.ಎಂ. ಕಲ್ಬುರ್ಗಿಯವರನ್ನು ಹಂತಕರು ಹಣೆಗೆ ಗುಂಡಿಟ್ಟು ಕೊಂದರೆಂಬ ಸುದ್ದಿ ಟಿ.ವಿ. ಯಲ್ಲಿ ಪ್ರಸಾರಗೊಂಡು ಸಾಹಿತ್ಯ ಸಂಶೋಧನಾ ಕ್ಷೇತ್ರ ಕೃಷಿಕರನ್ನಲ್ಲದೆ ಇಡೀ ಕನ್ನಡ ನಾಡಿನ ಪ್ರಜ್ಞಾವಂತರನ್ನು ದುಃಖದ ಕಡಲಿಗೆ ನೂಕಿತು.

ಡಾ. ಕಲ್ಬುರ್ಗಿಯವರು ಧಾರವಾಡದ ಕರ್ನಾಟಕದ ವಿಶ್ವವಿದ್ಯಾಲಯದಲ್ಲಿ ರೂಪಿತರಾದವರು. ಕನ್ನಡ ಸಾಹಿತ್ಯ ಸಂಶೋಧನಾ ಕ್ಷೇತ್ರಗಳಲ್ಲಿ ಅಪಾರ ಕೃಷಿ ಮಾಡಿದವರು. ಅತ್ಯುತ್ತಮ ಪ್ರಾಧ್ಯಾಪಕರು. ಕನ್ನಡ ಅಧ್ಯಯನ ಕೇಂದ್ರದ ಮುಖ್ಯಸ್ಥರಾಗಿ ಸೇವೆ ಸಲ್ಲಿಸಿದವರು. ಹಂಪೆಯ ವಿಶ್ವವಿದ್ಯಾಲಯದ ಕುಲಪತಿಗಳಾಗಿ ವಿಶ್ವವಿದ್ಯಾಲಯಕ್ಕೆ ಒಳ್ಳೆಯ ದಿಕ್ಕು ದೆಸೆ ಮೂಡಿಸಿದವರು. ವಚನ ಸಾಹಿತ್ಯದಲ್ಲಿ ಆಳವಾದ ಪಾಂಡಿತ್ಯ ಅವರದಾಗಿತ್ತು. ವಚನ ಸಾಹಿತ್ಯ ಸಂಪುಟಗಳನ್ನು ಕರ್ನಾಟಕ ಸರ್ಕಾರದಿಂದ ಪರಿಷ್ಕರಿಸುವ ಕಾಯಕದಲ್ಲಿ ನಿಷ್ಠೆಯಿಂದ ಸೇವೆಗೈದರು. ಅವರ ಸಾಹಿತ್ಯಕೃತಿಗಳಾಗಿ ಮಾರ್ಗ, ಕೆಟ್ಟಿತ್ತು ಕಲ್ಯಾಣ, ನೀರು ನೀರಡಿಸಿತ್ತು ಮುಂತಾಗಿ ಅನೇಕ ಕೃತಿಗಳನ್ನು ಪ್ರಕಟಿಸಿದ್ದರು. ಸಂಘ ಸಂಸ್ಥೆಗಳನ್ನು ಬೆಳೆಸಿದವರು. ಅನೇಕ ಸಂಶೋಧಕ ವಿದ್ಯಾರ್ಥಿಗಳಿಗೆ ಮಾರ್ಗದರ್ಶಕರಾಗಿ ಪಿಹೆಚ್.ಡಿ. ಪದವಿ ಗಳಿಸಲು ಕಾರಣರಾದವರು. ಕೇಂದ್ರ ಸಾಹಿತ್ಯ ಆಕಾಡೆಮಿ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ, ರಾಷ್ಟ್ರೀಯ ಬಸವ ಪುರಸ್ಕಾರ ಪ್ರಶಸ್ತಿ ಗಳಿಸಿದ್ದರು. ಶ್ರೀಮಠದೊಡನೆ ಭಕ್ತಿ ಬಾಂಧವ್ಯವನ್ನು ಬೆಳೆಸಿಕೊಂಡು ಬಂದಿದ್ದರು. ಸಭೆ ಸಮಾರಂಭಗಳಲ್ಲಿ ಭಾಗವಹಿಸುತ್ತಿದ್ದರು. ಶ್ರೀಮಠದೊಡನೆ ಸನ್ಮಾನಿಸಲಾಗಿತ್ತು. ಪರಮಪೂಜ್ಯರಲ್ಲಿ ವಿಶೇಷವಾದ ಭಕ್ತಿಯಿಟ್ಟುಕೊಂಡವರಾಗಿದ್ದರು. ಗುರುವಂದನ ಸಮಾರಂಭದಲ್ಲಿ ಹತ್ಯೆಯ ಪ್ರಕರಣದಲ್ಲಿ ಸತ್ಯಶೋಧವಾಗಬೇಕು. 'ಸಿದ್ಧಗಂಗಾ' ಕಲ್ಬುರ್ಗಿಯವರ ಆತ್ಮಕ್ಕೆ ಚಿರಶಾಂತಿಯನ್ನು ಕೊಡಲೆಂದು ದೇವರಲ್ಲಿ ಪ್ರಾರ್ಥನೆ ಸಲ್ಲಿಸುತ್ತದೆ. ಕುಟುಂಬದವರಿಗೆ ದುಃಖವನ್ನು ಸಹಿಸುವ ಶಕ್ತಿಯನ್ನು ಅನುಗ್ರಹಿಸಲೆಂದು ಪ್ರಾರ್ಥಿಸುತ್ತದೆ. ಡಾ. ಎಂ.ಎಂ. ಕಲ್ಬುರ್ಗಿಯವರ

೨೯-೦೭-೨೦೧೫ ಡಾ.ಎಸ್. ವಿದ್ಯಾಶಂಕರರು ಲಿಂಗದೊಳಗಾದರು. ಅವರು ನಮ್ಮ ಸಮಕಾಲೀನ ಶ್ರೇಷ್ಠ ವಿದ್ವಾಂಸರು, ಸಂಶೋಧಕರಲ್ಲೊಬ್ಬರು. ಅವರ 'ವೀರಶೈವ ಸಾಹಿತ್ಯ ಚರಿತ್ರೆ' ಐದು ಸಂಪುಟಗಳ ಭಾರಿ ಯೋಜನೆ, ದೈತ್ಯ ಸಾಹಸ, ವೀರಶೈವ ಎಂಬ ವಿಶೇಷಣವಿದ್ದರೂ ಇದು ಭಾಗಶಃ ಕನ್ನಡ ಸಾಹಿತ್ಯ ಚರಿತ್ರೆಯೇ' ಎಂಬ ಸಿ.ಪಿ.ಕೆ. ಯವರ ನುಡಿಗಳು ಡಾ. ವಿದ್ಯಾಶಂಕರ ವಿದ್ವತ್ತಿಗೆ ಕಟ್ಟಿದ ನುಡಿತೋರಣ. ಈ ಯೋಜನೆಯನ್ನು ಕುರಿತು ನಾಡಿನ ಮತ್ತೊಬ್ಬ ಶ್ರೇಷ್ಠ ಸಂಶೋಧಕ ರತ್ನರಾದ ಡಾ. ಎಂ. ಚಿದಾನಂದಮೂರ್ತಿಯವರು '.... ನಿಮ್ಮ ಕೃತಿ ಒಂದು ವಿಸ್ಮಯ ಹುಟ್ಟಿಸುವ ಶ್ರೇಷ್ಠ ಕೃತಿ' ಎನ್ನುತ್ತಾರೆ. ಡಾ. ಎಂ.ಎಂ. ಕಲ್ಬುರ್ಗಿಯವರು 'ವೀರಶೈವ ಸಾಹಿತ್ಯ ಚರಿತ್ರೆ'ಯ ಸಾಹಸಕ್ಕಾಗಿ ನಿಮಗೆ ನನ್ನ ಅಭಿನಂದನೆಗಳು' ಎಂದು ನುಡಿಯುತ್ತಾರೆ.

ಡಾ. ವಿದ್ಯಾಶಂಕರರು 'ಸ್ವಪ್ನಲೋಕ' ಮಾಸಪತ್ರಿಕೆಯನ್ನು ಪ್ರಕಟಿಸುತ್ತಿದ್ದುದು ಒಂದು ಅಭಿಮಾನದ ವಿಚಾರ. ಅಲ್ಲಿ ಅವರು ಬರೆಯುತ್ತಿದ್ದ ಸಂಪಾದಕೀಯ ಅತ್ಯುತ್ತಮವಾಗಿರುತ್ತಿದ್ದುದು. ಉತ್ತಮ ಪ್ರಾಧ್ಯಾಪಕರು, ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಯನ ಪೀಠದ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದವರು. ಸರಳ ಜೀವನ ಉನ್ನತ ಚಿಂತನ ಅವರದಾಗಿತ್ತು. 'ಎನ್ನ ನಾ ಹಾಡಿಕೊಂಡೆ' ಅವರು ಬಸವಣ್ಣನವರ ವಚನಗಳಿಗೆ ಬರೆದ ವ್ಯಾಖ್ಯಾನ. ಡಾ. ಎಲ್. ಬಸವರಾಜು ಅವರ ಬಸವಣ್ಣನವರ ವಚನ ಸಹಚಿಂತನದ ಮಾದರಿಯಲ್ಲಿ ಹೊರಬಂದ ವಚನಕೃತಿ.

ಉತ್ತಮ ಸ್ನೇಹಜೀವಿ ಮಠಮಾನ್ಯಗಳಲ್ಲಿ ಭಕ್ತಿ. ಅನೇಕ ಪ್ರಶಸ್ತಿ ಸನ್ಮಾನ ಗೌರವಗಳನ್ನು ಪಡೆದವರಾಗಿದ್ದರು. ಶ್ರೀಮಠದಿಂದ ನೀಡುವ ಶ್ರೀ ಸಿದ್ಧಲಿಂಗೇಶ್ವರ ಪ್ರಶಸ್ತಿಯನ್ನು ಅತ್ಯಂತ ವಿನಮ್ರತೆಯಿಂದ ಸ್ವೀಕರಿಸಿದ್ದರು.

ಶ್ರೀಯುತರ ಅಗಲಿಕೆ ಬಹು ದೊಡ್ಡ ನಷ್ಟ. ದಯಾಮಯನಾದ ದೇವರು ಡಾ. ವಿದ್ಯಾಶಂಕರರ ಆತ್ಮಕ್ಕೆ ಚಿರಶಾಂತಿ ಯನ್ನು ನೀಡಲಿ ಎಂದು ಪ್ರಾರ್ಥಿಸುತ್ತ ಕುಟುಂಬ ವರ್ಗದವರಿಗೆ ಅವರ ಅಗಲಿಕೆಯ ದುಃಖವನ್ನು ಸಹಿಸುವ ಶಕ್ತಿಯನ್ನು ಅನುಗ್ರಹಿಸಲಿ ಎಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.

– ಸಂಪಾದಕ





# 'ಅರಿವೇ ಗುರು'





'ಹೊಸ್ತಿಲಲ್ಲಿ ಹುಲ್ಲು ಹುಟ್ಟಿ, ಮನೆಯೊಳಗೆ ರಜ ತುಂಬಿದ' ಪರಿಸರವೇ ಎಲ್ಲೆಲ್ಲೂ, ಎತ್ತ ನೋಡಿದರೂ, ಸುತ್ತ ನೋಡಿದರೂ ಪರಿಸರ ಸ್ವಚ್ಛ ಭಾರತದ ಬಗ್ಗೆ ಹೆಚ್ಚು ಹೆಚ್ಚು ಮಾತು ಕೇಳಿ ಬರುತ್ತಿದೆ. ಪ್ರಧಾನಿಗಳಿಂದ ಮೊದಲುಗೊಂಡು ನಾಯಕರು, ಗಣ್ಯಾತಿಗಣ್ಯರು ಗ್ರಾಮ ಪಂಚಾಯತ್ ಸದಸ್ಯರುಗಳವರೆಗೆ ಕೈಯಲ್ಲಿ ಪೊರಕೆ ಹಿಡಿದ ಹಾದಿ ಬೀದಿಗಳನ್ನು, ಗುಡಿಗುಂಡಾರಗಳನ್ನು, ಮೂಲೆ ಮುರುಕುಗಳನ್ನು ಚರಂಡಿ ಗಟಾರಗಳನ್ನು ಶುದ್ಧಗೊಳಿಸುವ ಚಿತ್ರಗಳು ದಿನದಿನದ ಪತ್ರಿಕೆಗಳಲ್ಲಿ, ಟಿ.ವಿ.ಯಲ್ಲಿ ಕಾಣ ಬರುತ್ತಿವೆ. ಈ ಸ್ವಚ್ಛತೆ ಬೇಕು. ಅತಿ ಅಗತ್ಯ. ಆದರಿದು ಪ್ರದರ್ಶನದ ಪ್ರಚಾರದ ಯೋಜನೆಯಾಗಬಾರದು. ಬಾಹ್ಯದ ಸ್ವಚ್ಛತೆ ಆಂತರಿಕ ಸ್ವಚ್ಛತೆಗೆ ದಾರಿಮಾಡಿಕೊಡುವುದಾಗಬೇಕು. ಇಂದು ಇಡೀ ಜಗದಗಲ ಮುಗಿಲಗಲ ನಡೆದಿರುವ ಕ್ರೌರ್ಯ, ಹಿಂಸೆ, ಮೋಸ, ವಂಚನೆ, ದ್ವೇಷ, ಅತ್ಯಾಚಾರ ಮುಕ್ತ ಪರಿಸರ ನಿರ್ಮಾಣ ಮಾಡುವ ಅಗತ್ಯವಿರುವುದನ್ನು ಹೃದಯವಂತರೆಲ್ಲ ಮಾಡಬೇಕಾಗಿದೆ. ಮನುಷ್ಯನ ಮನೋಮಾಲಿನ್ಯ ಪರಿಸರ ಮಾಲಿನ್ಯಕ್ಕಿಂತ ಘನಘೋರವಾದುದು. ಅಂತರಂಗಶುದ್ಧಿ ಬಹಿರಂಗ ಶುದ್ಧಿಗೆ ಜೀವಧನವಾಗಬೇಕು. 'ಶರೀರ-ವಸ್ತ್ರ-ವಸ್ತುಗಳನ್ನು ಚೊಕ್ಕಟವಾಗಿಯೂ ವ್ಯವಸ್ಥಿತವಾಗಿಯೂ ಇಟ್ಟುಕೊಳ್ಳುವಂತೆಯೇ ಮನಸ್ಸನ್ನು ಚೊಕ್ಕಟವಾಗಿಟ್ಟಿರಬೇಕು. ಶುಚಿಯಾದ, ಪವಿತ್ರವಾದ ಮನಸ್ಸಿಗೆ ಏಕಾಗ್ರತೆ ಸುಲಭ. ನಮ್ಮ ಮನೆಯ ಕಸವನ್ನು ಇನ್ನೊಬ್ಬರು ಬಂದು ತೆಗೆಯುವುದಾಗ ಬಾರದು. ನಮ್ಮ ಬೀದಿಯನ್ನು ನಾವೇ ಸ್ವಚ್ಛಮಾಡಿಕೊಳ್ಳುವುದಾಗಬೇಕು. ನಮ್ಮ ಊರನ್ನು ಸ್ವಚ್ಛವಾಗಿಡುವುದು ನಾವು ಮಾಡಬಹುದಾದ ದೇವರ ಪೂಜೆ. ಕಸವ ಗುಡಿಸುವ ಕೈ ಹಸನಾದ ಮನದ ಸುಂದರ ಪುಷ್ಪ. ಕಸದಿಂದ ರಸ ತೆಗೆಯುವ ಕಲೆ ಜೀವನವೆಂಬುದನ್ನು ಅರಿತು ಬಾಳಬೇಕು. 'ಅರಿವೇ ಗುರು'.

## ಶ್ರೀ ಸಿದ್ಧಲಿಂಗೇಶ್ವರ ವಚನ



*ಚಿತ್ತಿನ ಮನೆಯಲ್ಲಿ ಸತ್ತಿಪ್ಪನವನಾರೋ?*
*ಸತ್ತವನ ನೋಡಿ ಎತ್ತ ಹೋದರೆ*
*ಎತ್ತಹೋದವ ಸತ್ತ ಸತ್ತವನೆದ್ದು ಕೂಗುತ್ತಿದ್ದಾನೆ*
*ಈ ಚಿತ್ರವನೇನೆಂಬೆಯೋ*
*ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ*

ಮಹಾಜ್ಞಾನಕ್ಕಾಶ್ರಯವಾದ ಬ್ರಹ್ಮರಂಧ್ರದಲ್ಲಿ ಸ್ವಾತ್ಮಾನಂದ ಸುಖದಲ್ಲಿ ಪರವಶವನ್ನೈದಿರುವಂಥ ನಿಷ್ಕಲ ಬ್ರಹ್ಮ ಈತನಾರೋ? ಸತ್ತವನ ಸ್ವಾತ್ಮಾನಂದ ಸುಖದಲ್ಲಿ ಪರಶಿವ ನೈದಿರುವಂಥ ನಿಷ್ಕಲ ಬ್ರಹ್ಮವನು ನಿರೀಕ್ಷಣೆ ಮಾಡಿ ಆ ನಿಷ್ಕಲ ಬ್ರಹ್ಮವನೆ ಗುರುಮುಖದಿಂದ ಇಷ್ಟಲಿಂಗವಾಗಿ ಅಂಗದಲ್ಲಿ ಸಂಬಂಧವ ಮಾಡಿಕೊಂಡು ಆ ಇಷ್ಟಲಿಂಗಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರ ಕ್ರಿಯೆಗಳಿಂದಾರಾಧಿ ಸುತ್ತೈದು ಹೋದರೆ, ಆರಾಧಿಸ ಬೇಕೆಂದು ಎಯ್ದು ಹೋದಂಥ ಶರಣನು ಸತ್ವಥವಾದ ಬ್ರಹ್ಮದಲ್ಲಿ ನಿಷ್ಪತ್ತಿಯಾಗಿ, ಆ ಸತ್ವಥವಾದ ಬ್ರಹ್ಮದಲ್ಲಿ ನಿಷ್ಪತ್ತಿಯಾದ ಶರಣನು ಹೆಚ್ಚಿ 'ಶಿವೋಹಂ', 'ಬ್ರಹ್ಮೋಹಂ' 'ಪ್ರಣಮೋಹಂ' ಎಂದು ಉಚ್ಚರಿಸು ತ್ತಿದ್ದಾನೆ. ಈ ಅತಿ ಆಶ್ಚರ್ಯವಾದಂಥ ಸುದ್ದಿಯನು ಏನೆಂದು ಹೇಳುವೆನೋ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

(ಕೃಪೆ : ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು- ಕುಣಿಗಲ್ ತಾಲ್ಲೂಕು)

## ಶ್ರೀ ಸಿದ್ಧಗಂಗಾ ಗುರು ಕರುಣ ತ್ರಿವಿಧಿ

ನಾ ನಿನ್ನ ನೆನೆವೆನು ನೀನೆನ್ನ ನೆನೆ ಬಿಡು
ನಿನ್ನ ನೆನಹೆನಗೆ ಜೀವಾಳ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿನ್ನ ಅನುಭಾವದ ತಣ್ಣನೆ ನುಡಿಗಳಿಗೆ
ಎರೆದು ನಿದ್ರಿಪ ಮಗುವಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಆನಂದಲೋಕದಲಿ ತಾನೊಂದು ರೂಪಾಗಿ'
ಸಾನಂದವನು ಬೆಳೆಸಿ ನಗುತಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆರು ಬಲ್ಲರು ನಿನ್ನ ಆಳನಿರಾಳವ
ಆರು ಬಲ್ಲರಯ್ಯಾ ಲೀಲೆಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆನರಿಯೆ ನಾನರಿಯೆ ಲೋಕ ತಾನರಿಯನು
ನೀನು ನಡೆಸಿರುವ ಶಿವಲೀಲೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅರಿವಿರದ ಶಿಶು ನಾನು ಅರಿವಿನ ತಾಯಿ ನೀನು
ಅರಿವಿನ ಹಾಲುಣಿಸಿ ಪೊರೆ ನೀನು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಆರು ಏನೆಂದರೂ ಓರಂತೆ ಇರು ಎಂದೆ'
ಆರು ಜರಿದರೂ ಕೊರಗದೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಕ್ತಿಯ ತವನಿಧಿಯೆ ಮುಕ್ತಿಯ ಮೂಲವೆ
ದಾಸೋಹ ಧಾಮದ ಶಿವನಿಧಿಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿನ್ನ ಸಮತಾಗುಣವ ನೀಡಿ ಸಲಹೆನ್ನನು
ನಿನ್ನಮಳ ಕಾಯಕ ಶಿವಸಿರಿಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಎಲ್ಲರಲಿ ಗುಣವಂತ ಎಲ್ಲರಲಿ ಸಂಪನ್ನ
ಎಲ್ಲವರೆಲ್ಲರಲಿ ವಂದಿತ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





## ಅವಿದ್ಯಾ

– ಶ್ರೀ ಸಿದ್ಧೇಶ್ವರ ಸ್ವಾಮಿಗಳು *

**ಮ**ನುಷ್ಯನಿಗೆ ನಿಸರ್ಗ ಕರುಣಿಸಿದ ಅಪರೂಪದ ಸಂಪತ್ತುಗಳಲ್ಲಿ ಮನಸ್ಸು ಒಂದು. ಅದು ಅಂತಸ್ಸಿರಿ. ಧನ-ಕನಕಾದಿ ಬಾಹ್ಯ ಸಿರಿಯಿಂದ ಬಹಿರಂಗದ ಬದುಕು ಸುಂದರ. ಅಂತಸ್ಸಿರಿಯಿಂದ ಮನದಿಂದ ಅಂತರಂಗದ ಬದುಕು ಸುಂದರ. ಜೀವನವೆಂದರೆ ಅಸಂಖ್ಯ ಅನುಭವಗಳ ಪ್ರವಾಹ. ಅನುಭವಗಳು ಉಂಟಾಗುವುದು ಈ ಮನದ ಮೂಲಕ. ಜಗತ್ತಿನಲ್ಲಿ ಮನುಷ್ಯ ಕಣ್ಣು ಬಿಟ್ಟಾಗಿನಿಂದ ಕೊನೆಯ ಉಸಿರಿನವರೆಗೆ ಮನಸ್ಸು ಏನಾದರೂ ಅನುಭವಿಸುತ್ತಲೇ ಇರುತ್ತದೆ. ಅಂತೆಯೇ ಈ ಮನಸ್ಸು ಸಿರಿವಂತವಾದದ್ದು ನಮ್ಮ ಬದುಕೂ ಸಿರಿವಂತ !

ಸಾವಿರಾರು ವರುಷಗಳ ಹಿಂದೆ ಪತಂಜಲಿಯು ಈ ಮನಸ್ಸನ್ನು ಕುರಿತು ಚಿಂತಿಸಿದ. ಅದರಲ್ಲಿ ಹುದುಗಿರುವ ಶಕ್ತಿ ಸಾಮರ್ಥ್ಯಗಳನ್ನು ಗುರುತಿಸಿದ. ಅದರ ವಿಕಾಸಕ್ಕಾಗಿ ಒಂದು ಯೋಗಸಾಧನವನ್ನು ನಿರೂಪಿಸಿದ. ಅದನ್ನು ಸಾಧಿಸಿದರೆ ಈ ಮನಸ್ಸು ಹಸನಾಗುತ್ತದೆ, ಹದಗೊಳ್ಳುತ್ತದೆ. ನಿಷ್ಕಳಂಕ, ನಿರಂಜನವಾಗುತ್ತದೆ. ಆಗ ನಮಗೆ ಪರಮಸತ್ಯ ಪರಮಾತ್ಮದರ್ಶನ !

ಈ ಮನದೊಳಗೆ ಅನೇಕ ದೋಷಗಳಿವೆ. ಈ ದೋಷಗಳಿಗೆ ಕ್ಲೇಶಗಳು ಎನ್ನುತ್ತಾರೆ. ಅವುಗಳಲ್ಲಿ ಪ್ರಧಾನ ವಾದುದು ಅವಿದ್ಯೆ, ಆತ್ಮಜ್ಞಾನ ಅಥವಾ ಸತ್ಯದರ್ಶನಕ್ಕೆ ಅಡ್ಡಿಯಾದದ್ದು ಈ ಅವಿದ್ಯೆ ಅಥವಾ ಅಜ್ಞಾನ ! ಈ ಅವಿದ್ಯೆಯ ನಿರಸನವಾಗುತ್ತಲೇ ನಮಗೆ ಈ ಜಗತ್ತಿನಲ್ಲಿರುವ ಶಾಶ್ವತ ಸತ್ಯ ದರ್ಶನ. ಪರಮಶಾಂತಿ, ಸಮಾಧಾನ ಅದು ಜೀವನ ಯೋಗ !

ಈ ಜಗತ್ತಿನಲ್ಲಿ ಯಾವುದು ಸ್ಥಿರ? ನಮ್ಮ ತನು-ಮನ, ಬುದ್ಧಿ-ಭಾವ ವಸ್ತು-ವಡವೆ, ದೇಶ-ಕೋಶ ಎಲ್ಲವೂ ಕ್ಷಣ-ಕ್ಷಣಕ್ಕೆ ಬದಲಾಗುತ್ತವೆ. ಅಂತೆಯೇ ಬುದ್ಧನು 'ಸರ್ವಂ ಕ್ಷಣಿಕಂ' ಎಂದ. ಆದರೆ ಈ ಅಸ್ಥಿರ ಜಗತ್ತಿನಲ್ಲಿಯೇ ಸುಸ್ಥಿರ ಇದೆ. ಅದನ್ನು ನಾವು ಗುರುತಿಸಬೇಕು. ಅದು ಪ್ರಥಮ ಸಾಧನೆ.

ಒಬ್ಬ ಗ್ರೀಕ್ ತತ್ತ್ವಜ್ಞಾನಿಯು 'ಈ ಜಗತ್ತು ಮೇರೆಗಳೇ ಇಲ್ಲದ ಒಂದು ಬೃಹತ್ ವರ್ತುಲ !' ಎಂದಿದ್ದಾನೆ. ವರ್ತುಲದ ತ್ರಿಜ್ಯ, ವ್ಯಾಸ, ಪರಿಘ ಎಲ್ಲವೂ ಕಾಣಿಸುತ್ತವೆ. ಆದರೆ ಅವೆಲ್ಲವುಗಳ ನಿರ್ಮಿತಿಗೆ ಕಾರಣವಾದ ನಿಜವಾದ ಬಿಂದು ಮಾತ್ರ ಕಣ್ಣಿಗೆ ಕಾಣಿಸದು. ಈ ಪ್ರಪಂಚವೆಂಬ ವರ್ತುಲ ದಲ್ಲಿ ಎಲ್ಲ ವಸ್ತುಗಳೂ ಗೋಚರ. ಆದರೆ ಅವೆಲ್ಲವುಗಳಿಗೆ ಆಧಾರವಾದ ಪರಮಸತ್ಯ ಮಾತ್ರ ಅಗೋಚರ ! ವರ್ತುಲಗಳು ತಿರುಗಿದರೂ ಅವುಗಳ ಕೇಂದ್ರಬಿಂದು ಸ್ಥಿರ. ಹಾಗೆಯೇ ಈ ಪ್ರಪಂಚವೆಲ್ಲ ಚಲಿಸಿದರೂ ಪರಮಸತ್ಯ ಪರಮಾತ್ಮನು ಮಾತ್ರ ಅಚಲ ! ಅಂಥ ಅಚಲ-ಅವಿಕಾರಿ ಪರಮಾತ್ಮನನ್ನು ಕಾಣುವುದಕ್ಕೆ ಈ ಮನಸ್ಸು ಒಂದು ಸಮರ್ಥ ಸಾಧನ. ಆದರೆ ಈ ಮನದೊಳಗಿರುವ ಅಜ್ಞಾನದ ಅವಿದ್ಯೆಯ ಕತ್ತಲೆಯು ಕಳೆಯುವವರೆಗೆ ನಮಗೆ ಸತ್ಯಸೂರ್ಯ ದರ್ಶನ ವಾಗಲಾರದು!

ಒಬ್ಬ ಭಿಕ್ಷುಕ ಹಲವಾರು ವರುಷಗಳಿಂದ ಭಿಕ್ಷೆ ಬೇಡುತ್ತಲಿದ್ದ. ಸುದೈವದಿಂದ ಒಂದು ದಿನ ಮಹಾರಾಜನ ಭೇಟಿಯಾಯಿತು. ಭಿಕ್ಷುಕನು ರಾಜನ ಎದುರು ತನ್ನ ಭಿಕ್ಷಾ ಪಾತ್ರೆಯನ್ನು ಚಾಚಿದ. ರಾಜನು ಅವನಿಗೆ ಹೊದಿಕೆಯುಳ್ಳ ಒಂದು ವಸ್ತುವನ್ನು ಕೊಟ್ಟು ಹೇಳಿದ, 'ಇದೊಂದು ಅಮೌಲ್ಯ ವಸ್ತು, ಬಳಸು, ನೀನು ಸಿರಿವಂತನಾಗುವಿ!

ಭಿಕ್ಷುಕನು ಅದನ್ನು ಮನೆಗೆ ಒಯ್ದು ಏಕಾಂತದಲ್ಲಿ ಬಿಚ್ಚಿ ನೋಡಿದ. ಅದೊಂದು ಪಾತ್ರೆ. ಕಬ್ಬಿಣದಂತೆ ಕಂಡಿತು. ನಿರಾಶನಾದ, ನಿಟ್ಟುಸಿರೆಳೆದ. ಈ ಹೊಸ ಪಾತ್ರೆ ಹಿಡಿದು ಭಿಕ್ಷೆ ಬೇಡಲು ನಡೆದ. ಕಾಲ ಗತಿಸಿತು. ಮತ್ತೊಮ್ಮೆ ಮಹಾರಾಜನ ಭೇಟಿಯಾಯಿತು. ಈತ ಭಿಕ್ಷೆ ಬೇಡುತ್ತಿರು ವುದನ್ನು ನೋಡಿ ಮಹಾರಾಜ ಚಕಿತನಾಗಿ ಕೇಳಿದ, 'ಅದೇಕೆ,

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

ನೀನು ಭಿಕ್ಷೆ ಬೇಡುತ್ತಿರುವೆಯಲ್ಲ?' 'ಇನ್ನೇನು ಮಾಡಲಿ ಮಹಾರಾಜರೆ? ತಾವಿತ್ತ ಈ ಕಬ್ಬಿಣದ ಪಾತ್ರೆ ನನ್ನ ಬಡತನವನ್ನೇನೂ ಕಳೆಯಲಿಲ್ಲ' ಎಂದ ಭಿಕ್ಷುಕ.

'ಅದು ಕಬ್ಬಿಣದ ಪಾತ್ರೆಯಲ್ಲ. ಕಬ್ಬಿಣವನ್ನು ಚಿನ್ನಾಗಿಸುವ ಪರುಷ ಪಾತ್ರೆ!' ಎಂದ ಮಹಾರಾಜ. ಈ ಮಾತನ್ನು ಕೇಳುತ್ತಲೇ ಭಿಕ್ಷುಕನಿಗೆ ಆಘಾತವಾಗಿತ್ತು! ಆಘಾತ ಎಷ್ಟು ತೀವ್ರವಾಗಿತ್ತೆಂದರೆ ಆತನ ಹೃದಯ ನಿಂತಿತ್ತು. ಪ್ರಾಣ ಪಕ್ಷಿ ಹಾರಿಹೋಗಿತ್ತು! ಕೈಯಲ್ಲಿ ಅಮೌಲ್ಯವಾದ ಪರುಷ ಪಾತ್ರೆಯನ್ನು ಹಿಡಿದ ಭಿಕ್ಷುಕ ಅಜ್ಞಾನದಿಂದ ಭಿಕ್ಷುಕನಾಗಿಯೇ ಅಸುನೀಗಿದ್ದ!

ಈ ದೇಹದಲ್ಲಿ, ಈ ಜಗತ್ತಿನಲ್ಲಿ, ಸರ್ವತ್ರ ಪರಮ ಸತ್ಯ ಪರಮಾತ್ಮನಿರುವನು. ಜಗದೊಡೆಯನೇ ಎಲ್ಲರ ಅಂತರಂಗದಲ್ಲಿ ನೆಲೆಸಿರುವನು. ಇದನ್ನು ಅರಿಯಲಾರದ ಮನುಷ್ಯನು ತಾನು ದರಿದ್ರನೆಂದು ಭಾವಿಸಿ ಅನಂತ ದುಃಖಕ್ಕೆ ಒಳಗಾಗಿದ್ದಾನೆ! ಈ ಅಜ್ಞಾನ ಅಥವಾ ಅವಿದ್ಯೆಯನ್ನು ಕಳೆದುಕೊಳ್ಳಲು ನಮ್ಮ ಮನಸ್ಸು ತನ್ನೆಲ್ಲ ಕ್ಲೇಶಗಳನ್ನು ಕಳೆದುಕೊಂಡು ಯೋಗಸಿದ್ಧವಾಗಬೇಕು. ಚಿರ-ಸ್ಥಿರಗೊಳ್ಳಬೇಕು. ಆಗ ನಮಗೆ ಪರಮ ಸತ್ಯ-ಪರಮಾತ್ಮ ದರ್ಶನ.

ಒಂದು ಮರದಡಿಯಲ್ಲಿ ಒಬ್ಬ ಬೌದ್ಧ ಸನ್ಯಾಸಿ ಕುಳಿತಿದ್ದಾನೆ. ಅದು ಪೌರ್ಣಿಮೆಯ ಸಂಜೆ. ಆಗಸದಲ್ಲಿ ಚಂದಿರ, ಸುತ್ತೆಲ್ಲ ಹಾಲು ಬೆಳದಿಂಗಳು. ಅದೆಲ್ಲಕ್ಕೂ ಮಿಗಿಲಾಗಿ ಸನ್ಯಾಸಿಯ ಮುಖಕಮಲದಲ್ಲಿ ಸತ್ಯದರ್ಶನದ ದಿವ್ಯ ಬೆಳಕು. ಓರ್ವ ವ್ಯಕ್ತಿ ಬಂದು ಸನ್ಯಾಸಿಗೆ ನಮಸ್ಕರಿಸಿ ಕೇಳುತ್ತಾನೆ. 'ಪೂಜ್ಯರೇ, ತಾವು ಈ ಘೋರಾರಣ್ಯದಲ್ಲಿ ಇರುವ ಕಾರಣ?' 'ಸತ್ಯ ಶೋಧನೆಗಾಗಿ'. 'ಎಷ್ಟು ದಿನಗಳಿಂದ?' 'ಹಲವಾರು ವರುಷಗಳಿಂದ'. 'ತಾವು ಸತ್ಯ ಶೋಧಿಸಿದಿರಾ?' 'ಇಲ್ಲ!' ಹಾಗಾದರೆ ನಿಮ್ಮ ಸಾಧನೆ ವ್ಯರ್ಥವಾಗಲಿಲ್ಲವೇ?' 'ಇಲ್ಲ, ನಾನು ಶೋಧನೆ ನಿಲ್ಲಿಸಿದಾಕ್ಷಣವೇ ನನಗೆ ಸತ್ಯದರ್ಶನ ತನಗೆ ತಾನೆ ಸಮನಿಸಿತು!'

ಸತ್ಯ ಶೋಧಿಸಲು ನಾವು ಎಲ್ಲಿಯೂ ಹೋಗಬೇಕಾಗಿಲ್ಲ. ನಮ್ಮ ಮನಸ್ಸು ಪರಿಶುದ್ಧವಾದರೆ ನಾವು ಇರುವಲ್ಲಿಯೇ ನಮಗೆ ಸತ್ಯದರ್ಶನ! ಮನಶುದ್ಧಿಗೆ ಸುಲಭ ಸಾಧನವೆಂದರೆ ಸತ್ಸಂಗ, ಸತ್ಯಶ್ರವಣ, ದಿನದಲ್ಲಿ ಕೆಲವು ಕ್ಷಣವನ್ನಾದರೂ ನಾವು ಸಂತರ, ಶರಣರ ಪವಿತ್ರ ಸಾನಿಧ್ಯದಲ್ಲಿ ಕಳೆಯಬೇಕು. ಅವರ ಸದುಪದೇಶವನ್ನು ಆಲಿಸಬೇಕು. ಬಸವಣ್ಣನವರು ಪ್ರಧಾನಮಂತ್ರಿ ಆಗಿದ್ದರೂ ನಿತ್ಯವೂ ಶರಣರ ಸಂಗ ಸಾಧಿಸಿದರು. ಸತ್ಸಂಗದಿಂದ ನಮ್ಮ ಮನಸ್ಸು ನಿರಾಯಾಸವಾಗಿ ನಿರ್ಮಲವಾಗುತ್ತದೆ. ಅವಿದ್ಯೆಯ ಕತ್ತಲೆಯು ಕಳೆದುಹೋಗುತ್ತದೆ. ಜೀವನದಲ್ಲಿ ಶಾಂತಿಸಮಾಧಾನದ ಬೆಳಕು ಹರಿದು ಬರುತ್ತದೆ. ❑

## ಶ್ರೀವಾಣಿ

- ❑ ಜೀವನ ಒಂದು ಕ್ರಿಯಾಕ್ಷೇತ್ರ. ಇಲ್ಲಿ ಕರ್ಮಶೀಲರಾಗಿ ಬದುಕುವುದು ಮುಖ್ಯ. ದುಡಿಮೆಗೆ ಇಲ್ಲಿ ಪ್ರಾಮುಖ್ಯತೆ. ದುಡಿಮೆ ಸತ್ಯಶುದ್ಧವಾಗಿರಬೇಕು. ಕಾಯಕ ಬದ್ಧವಾಗಿ ಬದುಕುವುದು ಇಲ್ಲಿ ಸಲ್ಲುವ ಜೀವನ ವಿಧಾನ. ಕಾಯಕಜೀವಿ ಆಧ್ಯಾತ್ಮಜೀವಿಯೂ ಆಗಿರುತ್ತಾನೆ. ಏಕೆಂದರೆ ಕಾಯಕ ಕೇವಲ ಸ್ವಾರ್ಥಕ್ಕಾಗಿ ದುಡಿಯುವ ಮಾರ್ಗವಲ್ಲ; ಲೋಕಹಿತಕ್ಕಾಗಿಯೂ ದುಡಿಯುವುದಾಗಿರುತ್ತದೆ.
- ❑ ದುಡಿದು ತಿನ್ನುವುದು ಪ್ರಸಾದವಾಗುತ್ತದೆ; ಅದು ಪದಾರ್ಥವೆನಿಸುವುದಿಲ್ಲ. ಮೈಗಳ್ಳತನದಿಂದ, ಸೋಮಾರಿಗಳಾಗಿ ಊಟ ಮಾಡುವುದು ಕೂಳಾಗುತ್ತದೆ; ಪ್ರಸಾದವಾಗುವುದಿಲ್ಲ. ಇಂದು ಪ್ರಸಾದ ಜೀವಿಗಳು ವಿರಳವಾಗುತ್ತಿದ್ದಾರೆ. ಕಾಯಕ ಮಾಡದೆ ತಿನ್ನುವುದು ಕೂಳು; ಶ್ರಮ ಜೀವನ ನಡೆಸಿ ಊಟಮಾಡುವುದು ಪ್ರಸಾದ.
- ❑ ಮಾನವ ಜನ್ಮವನ್ನು ಸಾರ್ಥಕಗೊಳಿಸಲು ಸಾಧಕವಾದದು ಧರ್ಮ. ಈ ಬಗೆಯ ಧರ್ಮದ ಆಚರಣೆ ದಿನನಿತ್ಯದ ಜೀವನ ಕ್ರಮವಾಗಬೇಕು. ಧರ್ಮದಿಂದ ಹಣವನ್ನು ಗಳಿಸಬೇಕು. ಧರ್ಮಕ್ಕೆ ವಿರುದ್ಧವಾದ ಗಳಿಕೆ ಅನರ್ಥವಾಗುತ್ತದೆ. ಧರ್ಮ, ಅರ್ಥ ಕಾಮಗಳು ನಮಗೆ ಮುಂದೆ ಸಿಗಬಹುದಾದ ಮೋಕ್ಷಕ್ಕೆ ಸಹಾಯವಾಗಬೇಕು.





# ಶಿಕ್ಷಕರಿಗೊಂದು ಸಂಕಲ್ಪ ಸಂಹಿತೆ

## ಸೆಪ್ಟೆಂಬರ್ ೫ ಶಿಕ್ಷಕರ ದಿನ

- ಗೊ.ರು. ಚನ್ನಬಸಪ್ಪ *

ಶಿಕ್ಷಣದ ಆಶಯ ವಿದ್ಯಾರ್ಥಿಗಳಲ್ಲಿ ಜೀವನ ಪ್ರಜ್ಞೆಯನ್ನು ಅರಳಿಸುವುದು. ಈ ದೃಷ್ಟಿಯಲ್ಲಿ ನಮಗೆ ಬೇಕಾಗಿರುವುದು ಅನುಕರಣೆಯ ಶಿಕ್ಷಣವಲ್ಲ. ಅನುಭವದ ಶಿಕ್ಷಣ. ಜಾಣ್ಮೆಯ ಶಿಕ್ಷಣವಲ್ಲ; ಉಪಯುಕ್ತ ಶಿಕ್ಷಣ. ನಮ್ಮ ಬೋಧನೆಗೆ ಬದುಕಿನ ಸ್ಪರ್ಶವಿರಬೇಕು. ಸಂಸ್ಕೃತಿಯ ಸಂಸ್ಕಾರವಿರಬೇಕು. ವಿದ್ಯಾರ್ಥಿಗಳಲ್ಲಿ ಕೇವಲ ವಿಷಯ ತುರುಕಬಾರದು; ವಿವೇಚನೆ ತುಂಬಬೇಕು. ನಾವು ವಿದ್ಯಾರ್ಥಿಗಳಲ್ಲಿ ಮುಖ್ಯವಾಗಿ ವಿಕಾಸಗೊಳಿಸಬೇಕಾದದ್ದು ಜೀವನ ಶ್ರದ್ಧೆ ಮತ್ತು ಮಾನವ ಪ್ರೇಮಗಳನ್ನು ಶಿಕ್ಷಣ ತಜ್ಞರು ಹೇಳುವಂತೆ ನಾವು ನೀಡುವ ಶಿಕ್ಷಣ ಹೊರಗಿನಿಂದ ಬಿಡುವ ಬೆಳಕಾಗಬಾರದು; ಒಳಗಿರುವುದನ್ನು ಪ್ರಕಾಶಗೊಳಿಸುವಂತಿರಬೇಕು.

ಒಂದು ಅರ್ಥಪೂರ್ಣ ಮಾತಿದೆ; 'Every new born child is genius, but schools turn them to blockheads' ಎಂದರೆ 'ಹುಟ್ಟುವ ಪ್ರತಿಯೊಂದು ಮಗುವೂ ಪ್ರತಿಭೆಯೊಂದಿಗೇ ಇರುತ್ತದೆ. ಆದರೆ ಶಾಲೆಗಳು ಅದನ್ನು ಪೆದ್ದುಗೊಳಿಸುತ್ತವೆ'. ವಾಸ್ತವಗಾಗಿ, ಮಕ್ಕಳಲ್ಲಿ ದೈವಶ್ರದ್ಧೆ, ಕರ್ತವ್ಯಪ್ರಜ್ಞೆ, ಸಮಯಪ್ರಜ್ಞೆ, ಹೊಣೆಗಾರಿಕೆ, ಸಹಕಾರ ಭಾವ, ಪರಧರ್ಮ ಸಹಿಷ್ಣುತೆ, ಕಾರ್ಯ ನಿಷ್ಠೆ, ಸಾಹಸ ಪ್ರವೃತ್ತಿ, ಸ್ನೇಹ ಸಂಪನ್ನತೆ, ಸಹನಾಭಾವ, ಪರಿಸರ ಪ್ರೇಮ ಲೋಕಪ್ರೀತಿ- ಇವೆಲ್ಲಕ್ಕೂ ಮಿಗಿಲಾಗಿ ಆತ್ಮವಿಶ್ವಾಸ ಮತ್ತು ಆತ್ಮಗೌರವ ಗುಣಗಳನ್ನು ಅರಳಿಸಬೇಕು. ಹಾಗೆ ಅರಳಿಸಬೇಕಾದರೆ ಶಿಕ್ಷಕನು ಮೊದಲು ಈ ಎಲ್ಲ ಗುಣಗಳ ಗಣಿಯಾಗಿರಬೇಕು. ಶಿಕ್ಷಕನಾದವನು ಮನಸ್ಸು-ಮಾತು-ಕೃತಿ ಈ ಮೂರರ ಸಾಮರಸ್ಯದ ಸಂಗಮವಾಗಿರಬೇಕು.

ನಾನು ಶಿಕ್ಷಕರನ್ನು ಕುರಿತು ಮಾತನಾಡುವಾಗ ಸಾಮಾನ್ಯವಾಗಿ ಹೇಳುವುದೆಂದರೆ ಶಿಕ್ಷಕ ಹೇಗಿರಬೇಕೆಂದರೆ, ಅವನಿಗೆ 'ಜಾತಿ-ಮತಗಳ ಜಂಜಡವಿರಬಾರದು, ಪಂಥ ಪಂಗಡಗಳ ಪಾಶವಿರಬಾರದು. ಆಸೆ-ಅಮಿಷಗಳ ಆಕರ್ಷಣೆಯಿರಬಾರದು. ಮೇಲು-ಕೀಳುಗಳ ಅಂತರವಿರಬಾರದು. ವರ್ಣ-ವರ್ಗಗಳ ವ್ಯತ್ಯಾಸವಿರಬಾರದು. ಅಂತಸ್ತು-ಅಧಿಕಾರಿಗಳ ಹುಚ್ಚಿರಬಾರದು. ಹೊಗಳಿಕೆ- ತೆಗಳಿಕೆಗಳ ಹಂಗಿರಬಾರದು. ಬೆಡಗು-ಬಿನ್ನಾಣಗಳ ಭ್ರಾಂತಿ ಇರಬಾರದು. ಮಾಯೆ-ಮತ್ಸರಗಳ ಮಾಟವಿರಬಾರದು. ಅರ್ಥಹೀನ ಶಾಸ್ತ್ರ-ಸಂಪ್ರದಾಯಗಳ ಸಂಕೋಲೆ ಇರ ಬಾರದು. ವೇಷ-ಭಾಷೆಗಳ ವಿಲಕ್ಷಣವಿರಬಾರದು. ಸಂಪತ್ತು -ಸೌಂದರ್ಯಗಳ ಸೆಳೆತವಿರಬಾರದು. ಕಾಲ-ದೇಶಗಳ ಕಟ್ಟಳೆ ಇರಬಾರದು. ಸಂಚು-ಸಂಗ್ರಹಗಳ ಸುಳಿಯಿರಬಾರದು. ಪೂರ್ವಾಗ್ರಹ ಪೀಡೆಯಿರಬಾರದು. ಶಿಕ್ಷಕನಿಗೆ ಮುಖ್ಯವಾಗಿ ಇರಬೇಕಾದದ್ದು ನಿನ್ನೆಯ ಅನುಭವ, ಇಂದಿನ ಪ್ರಜ್ಞೆ ಮತ್ತು ನಾಳಿನ ಪರಿಕಲ್ಪನೆ'.

'ಶಿಕ್ಷಕ' ಎನ್ನುವುದನ್ನು ಇಂಗ್ಲಿಷಿನಲ್ಲಿ 'Teacher' ಎನ್ನಲಾಗಿದೆ. teach ಎಂಬ ಶಬ್ದಕ್ಕೆ ನಿಘಂಟಿನಲ್ಲಿ To show, To direct, To impart knowledge, To guide studies, to impress on the mind, To accustom, To counsel, To practice giving instruction - ಇಷ್ಟೆಲ್ಲ ಅರ್ಥಗಳಿವೆ. ಎಂದರೆ ತೋರಿಸು, ನಿರ್ದೇಶಿಸು, ಜ್ಞಾನ ನೀಡು, ಮಾರ್ಗದರ್ಶನ ಮಾಡು, ಮನಸ್ಸಿನ ಮೇಲೆ ಪ್ರಭಾವ ಬೀರು, ಹೊಂದಿಕೋ, ಸಲಹೆ ನೀಡು. ಹಾಗೆಯೇ ಮತ್ತೊಂದು ಮಹತ್ವದ ಅರ್ಥವೆಂದರೆ 'ಕಲಿಸುತ್ತಲೇ ಕಲಿ' ಎನ್ನುವುದು. ನಿಜವಾದ ಶಿಕ್ಷಕ ತಾನು ಮಕ್ಕಳಿಗೆ ಕಲಿಸುತ್ತಲೇ ತಾನೂ ಕಲಿಯುತ್ತಾನೆ. ತನ್ನ ಬೋಧನೆಯಲ್ಲಿ ಪಡೆದ ಅನುಭವವನ್ನು ಆಧರಿಸಿ, ಬೋಧನೆಯನ್ನು ಸುಧಾರಿಸಿಕೊಳ್ಳುತ್ತಾನೆ. ಶಿಕ್ಷಕ ಮಕ್ಕಳಿಗೆ ಕಲಿಸುತ್ತಲೇ ತಾನೂ ಕಲಿಯುತ್ತಾನೆ. ತನ್ನ ಬೋಧನೆಯಲ್ಲಿ ಪಡೆದ ಅನುಭವವನ್ನು ಆಧರಿಸಿ, ಬೋಧನೆಯನ್ನು ಸುಧಾರಿಸಿಕೊಳ್ಳುತ್ತಾನೆ.

* ಅಧ್ಯಕ್ಷರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್, ಬೆಂಗಳೂರು.

ಇಲ್ಲಿ teacher ಎಂಬ ಶಬ್ದದಲ್ಲಿ ಏಳು ಅಕ್ಷರಗಳಿವೆ. ಆ ಒಂದೊಂದು ಅಕ್ಷರವೂ ಒಂದೊಂದು ಲಕ್ಷಣವನ್ನು ಹೇಳುತ್ತದೆ. T ಎನ್ನುವುದು Totality- ಪೂರ್ಣತೆ. E ಎನ್ನುವುದು Eligibility -ಅರ್ಹತೆ. H ಎನ್ನುವುದು Honesty–ಬದ್ಧತೆ. C ಎನ್ನುವುದು Clarity-ಸ್ಪಷ್ಟತೆ. H ಎನ್ನುವುದು Honesty–ಪ್ರಾಮಾಣಿಕತೆ. E ಎನ್ನುವುದು Elasticity-ಪ್ರಫುಲ್ಲತೆ, ಕೊನೆಯ R ಎನ್ನುವುದು Reality –ವಸ್ತುನಿಷ್ಠತೆ, ಇವನ್ನು ಒಂದು ರೀತಿಯಲ್ಲಿ ಸಪ್ತಸೂತ್ರಗಳೆಂದರೂ ಸಲ್ಲುತ್ತದೆ.

ಶಿಕ್ಷಕನು ಕೇವಲ ಪುಸ್ತಕದ ಪಾಠಾನುಭವಿ ಆದರಷ್ಟೇ ಸಾಲದು; ಅವನಿಗೆ ಲೋಕಾನುಭವವೂ ಅಷ್ಟೇ ಅಗತ್ಯ. ಈ ಲೋಕಾನುಭವ ಮುದ್ರಿತ ಪುಸ್ತಕಗಳಲ್ಲಿ ದೊರೆಯುವಂಥದ್ದಲ್ಲ; ಪರಿಸರದ ಪ್ರಭಾವದಿಂದ ಪಡೆಯುವಂಥದ್ದು. ಪಾರಸ್ಪರಿಕ ಸಂಬಂಧದಿಂದ ಬರುವಂಥದ್ದು. ನಾವು ಜೀವನದಲ್ಲಿ ಕಲಿಯಬೇಕಾದ್ದು ಬಹಳವಿದೆ. ಅಂತಹ ಕಲಿಕೆಯಲ್ಲಿ ವ್ಯಕ್ತಿಜೀವನಕ್ಕೆ ಸಂಬಂಧಿಸಿದ ವಿಷಯಗಳು ಸಾಕಷ್ಟಿರುತ್ತವೆ. ಅದರಲ್ಲೂ ಜಗತ್ತೆಲ್ಲ ಒಂದಾಗುತ್ತಿರುವ ಇಂದಿನ ಜಾಗತೀಕರಣದ ಸನ್ನಿವೇಶದಲ್ಲಂತೂ ಲೋಕಜ್ಞಾನದ ಅಗತ್ಯ ಅಷ್ಟಿಷ್ಟಲ್ಲ. ಇದು ಜ್ಞಾನ ದಾನಮಾಡಬೇಕಾದ ಶಿಕ್ಷಕನಿಗೆ ಉಳಿದೆಲ್ಲರಿಗಿಂತ ಹೆಚ್ಚು ಅಗತ್ಯವೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಶಿಕ್ಷಕನೆಂದರೆ ಬೇರೇನೂ ಅಲ್ಲ; ಅವನು ಜ್ಞಾನಕೋಶ!

ಈ ಲೋಕಜ್ಞಾನ ಸಂಗ್ರಹಕ್ಕಾಗಲೀ, ಸಂಗ್ರಹಿಸಿದ ಜ್ಞಾನವನ್ನು ಇತರರಿಗೆ ವಿತರಿಸಲಿಕ್ಕಾಗಿಯಾಗಲೀ ಶಿಕ್ಷಕನಿಗೆ ಇರಬೇಕಾದ ಮೊಟ್ಟಮೊದಲ ಲಕ್ಷಣವೆಂದರೆ ತನ್ನ ವೃತ್ತಿಗೌರವ. ಅವನು ಅರಿವು ನೀಡುವ ಗುರು ಎಂಬ ಕಾರಣದಿಂದ ಇಡೀ ಸಮುದಾಯವೇ ಅವನನ್ನು ಗೌರವಿಸುತ್ತದೆ. ಆ ಗೌರವವೇ ಅವನ ವೃತ್ತಿಗೌರವಕ್ಕೆ ಪ್ರೇರಣೆಯಾಗಬೇಕು.

ಶಿಕ್ಷಕನು ತನ್ನ ವೃತ್ತಿಗನುಗುಣವಾಗಿ ಮೊದಲು ವ್ಯವಹರಿಸಬೇಕಾದದ್ದು ಮಕ್ಕಳೊಡನೆ. ಈ ಮಕ್ಕಳೇನೂ ಸಾಮಾನ್ಯವಲ್ಲ. ಆಸಕ್ತ ಮಕ್ಕಳಿದ್ದಂತೆ ಅನಾಸಕ್ತ ಮಕ್ಕಳೂ ಇರುತ್ತಾರೆ. ಸಾಹಸ ಪ್ರವೃತ್ತಿಯ ಮಕ್ಕಳಿದ್ದಂತೆ ಸೋಮಾರಿತನದ ಮಕ್ಕಳೂ ಇರುತ್ತವೆ. ಚುರುಕು ಬುದ್ಧಿಯ ಮಕ್ಕಳಿದ್ದಂತೆ ಮಂದಬುದ್ಧಿಯ ಮಕ್ಕಳೂ ಇರುತ್ತವೆ. ಶ್ರದ್ಧೆಯ ಮಕ್ಕಳಿದ್ದಂತೆ ನಿದ್ದೆಯ ಮಕ್ಕಳೂ ಇರಬಹುದು. ಧೈರ್ಯದ ಮಕ್ಕಳಿರುವಂತೆ ಅಂಜಿಕೆ ಮಕ್ಕಳೂ ಇರುತ್ತಾರೆ. ಆಡುವ ಮಕ್ಕಳಿರುವಂತೆ ಕಾಡುವ ಮಕ್ಕಳೂ ಇರಬಹುದು. ಹೊಡೆದು ಬಡಿದರೂ ಅಳುಕದ ಅಲ್ಲಾಡದ ಮಕ್ಕಳಿರು ವಂತೆ, ಮುಟ್ಟಿದರೆ ಸಾಕು ಕಣ್ಣಲ್ಲಿ ಮುಂಗಾರು ಮಳೆ ಕರೆಯುವ ಮಕ್ಕಳೂ ಇರುತ್ತಾರೆ. ಪಾಠಕ್ಕಿಂತ ಆಟವನ್ನೇ ಬಯಸುವ ಕೆಲವು ಮಕ್ಕಳಿದ್ದರೆ, ಇನ್ನು ಕೆಲವರಿಗೆ ಇವೆರಡೂ ಬೇಡವಾಗಿ ಊಟವೊಂದೇ ಪ್ರಿಯವಾಗಿರುವು ದುಂಟು. ಕೆಲವು ಮಕ್ಕಳು ಸಾತ್ವಿಕರಿದ್ದರೆ ಮತ್ತೆ ಕೆಲವು ಅಸಭ್ಯರಿರಬಹುದು.

ಯಾವ ಬಗೆಯ ಮಕ್ಕಳೇ ಇರಲಿ, ಅವರ ಶಿಕ್ಷಣಕ್ಕೆ ಮೂರು ರಕ್ಷೆಗಳು ಬೇಕು. ಅತ್ತ ಹೆತ್ತವರು, ಇತ್ತ ಶಿಕ್ಷಕರು ಮತ್ತು ಸುತ್ತಣ ಸಮಾಜ. ಈ ಮೂರೂ ವ್ಯವಸ್ಥೆಗಳಿಂದಲೇ ಮಕ್ಕಳು ಪ್ರಭಾವಿತರಾಗಬೇಕು; ಬದುಕಿನ ಭವಿಷ್ಯದ ಬೆಳಕು ಕಾಣಬೇಕು. ಈ ಮೂರೂ ವರ್ಗದ ವ್ಯಕ್ತಿಗಳಿಗೆ ಪ್ರಕೃತಿ ವಿಶೇಷದ ಪಂಚಭೂತಗಳ ಪ್ರಮಾಣವಿರಬೇಕು. ಎಂದರೆ ಭೂಮಿಯಷ್ಟು ತಾಳ್ಮೆ, ಸುಳಿಯುವ ಗಾಳಿಯಷ್ಟು ಸಮದೃಷ್ಟಿ, ಹರವಿನ ಆಕಾಶದಷ್ಟು ವಿಶಾಲ ಹೃದಯ, ಹರಿಯುವ ನೀರಿನಷ್ಟು ಪರಿಶುದ್ಧತೆ ಮತ್ತು ಉರಿಯುವ ಅಗ್ನಿಯಷ್ಟು ಉಜ್ವಲತೆ ಇರಬೇಕು. ಅವಿದ್ದರೆ ಮಾತ್ರ ಮಕ್ಕಳ ಸಮಗ್ರ ಶಿಕ್ಷಣ ಸಾಧ್ಯವಾಗುತ್ತದೆ. ಈಗ ನಾವೆಲ್ಲ ಹೇಳುತ್ತಿರುವ ಸರ್ವಶಿಕ್ಷಣ ಅಭಿಯಾನ ಅರ್ಥಪೂರ್ಣವಾಗುತ್ತದೆ. ಈ ಹಿನ್ನಲೆಯಲ್ಲಿ ನಮ್ಮ ಶಿಕ್ಷಣದ ರೀತಿ–ನೀತಿ, ಸ್ಥಿತಿ–ಗತಿ ಮತ್ತು ಗುರಿ–ಗಮನಗಳ ಬಗೆಗೆ ಗಂಭೀರ ಚಿಂತನೆ ನಡೆಸಬೇಕಾಗಿದೆ.

ನಮಗೆ ಸ್ವಾತಂತ್ರ್ಯ ಬಂದು ೬೮ ವರ್ಷಗಳಾಗಿವೆ. ಸ್ವತಂತ್ರ ಭಾರತ ನಮ್ಮ ಕೊರತೆಯನ್ನೆಲ್ಲ ನೀಗುವ ಒರತೆಯಾಗುವುದೆಂದು ನಾವು ನಿರೀಕ್ಷಿಸಿದ್ದೆವು. ಈ ೬೮ ವರ್ಷಗಳಲ್ಲಿ ಏನೂ ಪ್ರಗತಿಯೇ ಆಗಿಲ್ಲವೆಂದು ಹೇಳಲಾಗದಿದ್ದರೂ ನಾವು ನೈತಿಕವಾಗಿ ಅತ್ಯಂತ ಹೀನಾಯ ಸ್ಥಿತಿಗೆ ಇಳಿದಿದ್ದೇವೆ ಎಂಬುದನ್ನು ಅಷ್ಟು ಸುಲಭವಾಗಿ ಅಲ್ಲಗಳೆಯುವಂತಿಲ್ಲ. ಇದನ್ನು ನಾನು ಆರಂಭದಲ್ಲೇ ಹೇಳಿದ್ದೇನೆ. ಯಾವುದೇ ರಾಷ್ಟ್ರದ ಘನತೆ ಗೌರವಗಳು, ಸ್ಥಾನಮಾನಗಳು ಅಲ್ಲಿನ ಕೇವಲ ಭೌತಿಕ ಸಂಪತ್ತನ್ನು ಅವಲಂಬಿಸಿರುವುದಿಲ್ಲ. ಜನರ ನೈತಿಕ ಮಟ್ಟ ನಿಜವಾದಂತಹ ಅಳತೆಗೋಲೆಂಬುದನ್ನು ಮರೆಯಬಾರದು. ನೈತಿಕ ಮಟ್ಟದ ರಕ್ಷಣೆ ನಮ್ಮ ರಾಜಕೀಯ





ವ್ಯವಸ್ಥೆಯಿಂದ ಸಾಧ್ಯವೇ ಇಲ್ಲ ಎನ್ನುವುದನ್ನು ನಿತ್ಯವೂ ನಮ್ಮ ವ್ಯವಸ್ಥೆಯ ಹುತ್ತದಿಂದ ಹೊರಬರುತ್ತಿರುವ ಹಗರಣಗಳೇ ಸಾಕ್ಷಿಯಾಗಿವೆ.

ಇಂತಹ ಕಳವಳಕಾರಿ ಸನ್ನಿವೇಶದಲ್ಲಿ ನಮಗಿರುವ ಏಕಮಾತ್ರ ಆಸೆಯ, ಭರವಸೆಯ ಬೆಳಕೆಂದರೆ ನಮ್ಮ ಶಿಕ್ಷಕರು. ಶಿಕ್ಷಕರು ಸತ್ಸಂಕಲ್ಪ ಮಾಡಿ ಅದರಂತೆ ಸೇವೆ ಸಲ್ಲಿಸಿದರೆ ಮಾತ್ರ ಈ ದೇಶದ ನವನಿರ್ಮಾಣ ಸಾಧ್ಯ. ನಮಗೆ ಈಗ ಬೇಕಾಗಿರುವುದು ಶೀಲ–ಚಾರಿತ್ರ್ಯ ಶುದ್ಧಿಯ ವ್ಯಕ್ತಿತ್ವ ನಿರ್ಮಾಣ. ಸೌಹಾರ್ದ ಸಾಮರಸ್ಯಗಳ ಸಮಾಜ ನಿರ್ಮಾಣ. ನೀತಿ–ನೆಮ್ಮದಿಗಳ ರಾಷ್ಟ್ರನಿರ್ಮಾಣ, ವಿವೇಕ–ವಿಶ್ವಾಸಗಳ ವಿಶ್ವ ನಿರ್ಮಾಣ. ಈ ನಿರ್ಮಾಣ ಕಾರ್ಯ ಉಳಿದ ಯಾವ ತಜ್ಞರಿಂದಲೂ ಆಗುವ ಸಾಧ್ಯವಿಲ್ಲ. ಇದು ಶಿಕ್ಷಣ ತಜ್ಞರಿಂದ ಮಾತ್ರ ಸಾಧ್ಯ. ಶಿಕ್ಷಣ ತಜ್ಞರೆಂದರೆ ಶಿಕ್ಷಕರೇ ಎಂದು ನಾನು ತಿಳಿದಿದ್ದೇನೆ.

ಉಳಿದ ತಜ್ಞರು ರಸ್ತೆ, ಸೇತುವೆ, ಜಲಾಶಯ, ಬಹು ಅಂತಸ್ತಿನ ಕಟ್ಟಡ ಇತ್ಯಾದಿಗಳನ್ನು ನಿರ್ಮಿಸಬಹುದು. ಅದ್ಭುತವೆನಿಸುವ ಸಾಧನ–ಸಲಕರಣೆಗಳನ್ನು ಕಂಡು ಹಿಡಿಯಬಹುದು. ಬೃಹತ್ ತಂತ್ರಸ್ಥಾವರಗಳನ್ನು ಸ್ಥಾಪಿಸಬಹುದು. ಊಹೆಗೂ ನಿಲುಕದ ಸಂಪರ್ಕ–ಸಂವಹನ ತಂತ್ರಗಳನ್ನು ಶೋಧಿಸಬಹುದು. ಇವೆಲ್ಲ ಭೌತಿಕ ಸೌಲಭ್ಯ–ಸವಲತ್ತುಗಳಿಗೆ ಸಂಬಂಧಿಸಿದವು. ಆದರೆ ಇವೆಲ್ಲಕ್ಕಿಂತ ಮೂಲಾಧಾರವಾಗಿ ಇರಬೇಕಾದದ್ದು ನೈತಿಕ ನಿಷ್ಠೆ. ಇದನ್ನು ಎಳೆತನದಲ್ಲೇ ಬೆಳೆಸಲು ಸಾಧ್ಯವಿರುವುದು ಶಿಕ್ಷಕರಿಗೆ ಮಾತ್ರ ಎಂದು ಮತ್ತೆ ಮತ್ತೆ ಹೇಳಬಯಸುತ್ತೇನೆ.

ಈ ದೃಷ್ಟಿಯಿಂದಲೇ, ನಾನು ಶಿಕ್ಷಕರಿಗೆ ಸಂಬಂಧಿಸಿದ ಕಾರ್ಯಕ್ರಮಗಳಿಗೆ ಹೋದಾಗಲೆಲ್ಲ ಶಿಕ್ಷಕರ ಪಂಚಶೀಲಗಳನ್ನು ಪ್ರಸ್ತಾಪಿಸುತ್ತೇನೆ. ಆ ಪಂಚಶೀಲಗಳೆಂದರೆ, ಪ್ರಾಮಾಣಿಕತೆ, ಕ್ರಿಯಾಶೀಲತೆ, ಸಹನಶೀಲತೆ, ಕರ್ತವ್ಯ ಬದ್ಧತೆ ಮತ್ತು ರಾಷ್ಟ್ರೀಯತೆ. ಇವುಗಳನ್ನು ಶಿಕ್ಷಕರಿಗೆ ವಿವರಿಸಬೇಕಾಗಿಲ್ಲ.

ಒಬ್ಬ ಕವಿ ಒಂದು ಕಡೆ, 'ಉಸಿರಾಗಿ ಹೋಗಿ ಬರುವ ಗಾಳಿಗೆ ದಾರಿ ತಿಳಿದಿರಬೇಕು. ಅದು ಒಮ್ಮೆ ದಾರಿ ತಪ್ಪಿದರೆ, ಗಾಳಿ ಬೀದಿ ಪಾಲು, ದೇಹ ಮಣ್ಣು ಪಾಲು' ಎಂದಿದ್ದಾನೆ. ಅಂತೆಯೇ ನಮ್ಮ ರಾಷ್ಟ್ರದ ಬದುಕಿಗೆ ಶಿಕ್ಷಕರು ಉಸಿರೆಂದು ನಾನು ತಿಳಿದಿದ್ದೇನೆ. ಅವರು ಮಕ್ಕಳ ಒಳ–ಹೊರಗನ್ನು ಅರ್ಥಮಾಡಿಕೊಳ್ಳುವಲ್ಲಿ ತಪ್ಪಿದರೆ, ಅವರನ್ನು ಸರಿಯಾದ ಮಾರ್ಗದಲ್ಲಿ ಕೊಂಡೊಯ್ಯದಿದ್ದರೆ, ಆ ಮಕ್ಕಳ ಭವಿಷ್ಯವೇ ಹಾಳಾಗಿಬಿಡುತ್ತದೆ. ಈ ಬಗೆಗೆ ಪೋಷಕರಲ್ಲೂ ಜಾಗೃತಿ ಉಂಟುಮಾಡಬೇಕಾಗುತ್ತದೆ.

ಇದಕ್ಕಾಗಿ ನಾನು ಹೇಳಿದ ಪಂಚಶೀಲಗಳ ಜೊತೆಗೆ ಶಿಕ್ಷಕರು ಪಂಚಸೂತ್ರಗಳನ್ನು ಪಾಲಿಸಬೇಕು. ಆ ಪಂಚ ಸೂತ್ರಗಳೆಂದರೆ – ಆತ್ಮಗೌರವ (Self esteem), ಇತರರ ಬಗೆಗೆ ಪ್ರೀತಿ (Love towards others), ದೇವರಲ್ಲಿ ನಂಬಿಕೆ (Faith in god), ಭವಿಷ್ಯದ ಬಗೆಗೆ ಭರವಸೆ (Hope in the Future) ಮತ್ತು ಕ್ಷಮಾಗುಣ (Forgiveness). ಈ ಸೂತ್ರಗಳನ್ನು ಮೈಗೂಡಿಸಿಕೊಂಡು ಅವನ್ನು ನಮ್ಮ ಸೇವಾಹಾದಿಗೆ ದೀಪಗಳನ್ನಾಗಿ ಮಾಡಿಕೊಳ್ಳಬೇಕು. ನಾವು ಎಲ್ಲಿಂದ ಆರಂಭಿಸಿದೆವು ಎನ್ನುವುದು ಅಷ್ಟು ಮುಖ್ಯವಲ್ಲ. ಎಲ್ಲಿಗೆ ಮುಟ್ಟಿದೆವು ಎನ್ನುವುದು ಮುಖ್ಯ.

ಶಿಕ್ಷಕರಿಗೆ ಗುರುಗಳು ಎಂದೇ ಹೆಸರಿದೆ. ಅವರಿಗೆ ಒಂದು ಗೌರವಾನ್ವಿತ ಮತ್ತು ಮಹತ್ವದ ಕ್ಷೇತ್ರದಲ್ಲಿ ಸೇವೆ ಸಲ್ಲಿಸುವ ಅವಕಾಶ ದೊರಕಿದೆ. ಸಹಸ್ರಾರು ಮಕ್ಕಳ ಭವಿಷ್ಯವನ್ನು ರೂಪಿಸುವ ಬಹು ದೊಡ್ಡ ಅವಕಾಶ. ಆದ್ದರಿಂದಲೇ ಶಿಕ್ಷಕ ವೃತ್ತಿ ಇತರೆಲ್ಲ ವೃತ್ತಿಗಳಿಗಿಂತ ಶ್ರೇಷ್ಠ, ಪವಿತ್ರ ಎಂದು ನಾನು ತಿಳಿದಿದ್ದೇನೆ.

ನಾನು ಇದುವರೆಗೆ ಹೇಳಿದ ಮಾತುಗಳನ್ನು ಸಾರಗೊಳಿಸಿ ಇಪ್ಪತ್ತು ಅಂಶಗಳನ್ನು ಶಿಕ್ಷಕರ ಮುಂದಿಡ ಬಯಸುತ್ತೇನೆ.

೧. ನಿಮ್ಮ ವೃತ್ತಿಯ ಬಗೆಗೆ ನಿಮಗೆ ಪೂರ್ಣ ಅಭಿಮಾನವಿರಲಿ.
೨. ಶಿಕ್ಷಣ ಸೇವೆ ಪವಿತ್ರವಾದುದು ಎಂಬುದನ್ನು ಮರೆಯದಿರಿ.
೩. ಮುಗ್ಧ ಮಕ್ಕಳಿಗೆ ಜ್ಞಾನದಾನ ಒಂದು ಪುಣ್ಯದ ಕಾರ್ಯ.
೪. ನಿಮ್ಮ ಸೇವೆಯಲ್ಲಿ ಅವಿರಳ ಶ್ರದ್ಧೆ ಮತ್ತು ಬದ್ಧತೆಯಿರಲಿ.
೫. ಶಿಕ್ಷಕರಿಗೆ ಸಾರ್ವಜನಿಕ ಸಭ್ಯತೆ ಅಪೇಕ್ಷಣೀಯ.

೬. ಸರ್ಕಾರ–ಸಾರ್ವಜನಿಕರ ಮಧ್ಯೆ ನೀವೊಂದು ಸೇತು ವಿದ್ದಂತೆ.

೭. ದೀನ–ದಲಿತರ ಮಕ್ಕಳ ಬಗೆಗೆ ವಿಶೇಷ ಗಮನವಿರಲಿ.

೮. ಮಕ್ಕಳಲ್ಲಿ ಪರಿಸರ ಪ್ರಜ್ಞೆಯನ್ನು ಮೂಡಿಸಿ.

೯. ಪೋಷಕರಿಗೆ ಅವರ ಹೊಣೆಗಾರಿಕೆಯನ್ನು ಮನವರಿಕೆ ಮಾಡಿ.

೧೦. ನಿಮ್ಮ ಸೇವೆಯಲ್ಲಿ ಎಂದೂ ಉದಾಸೀನ ತಲೆದೋರ ದಿರಲಿ.

೧೧. ಕಾಲದ ಮಹತ್ವವನ್ನು ಮಕ್ಕಳಲ್ಲಿ ಮೈಗೂಡಿಸಬೇಕು.

೧೨. ಸಂಭಾವನೆಗಿಂತ ಸೇವೆ ಮುಖ್ಯವೆಂಬುದು ನೆನಪಿರಲಿ.

೧೩. ಶಿಕ್ಷಕರ ವೇಷ–ಭೂಷಣಗಳು ತುಂಬಾ ಸರಳವಾಗಿರ ಬೇಕು.

೧೪. ಜಾತಿ–ಮತ ಮತ್ತು ರಾಜಕೀಯಗಳಿಂದ ದೂರವಿರ ಬೇಕು.

೧೫. ತರಗತಿಗೆ ಹೋಗುವ ಮುನ್ನ ಪೂರ್ಣ ಸಜ್ಜಾಗಿರ ಬೇಕು.

೧೬. 'ಕಲಿಸುತ್ತಲೇ ಕಲಿ' ಎಂಬುದರ ಅರ್ಥ ತಿಳಿದಿರ ಬೇಕು. ದಿನಚರಿ ಬರೆಯಬೇಕು.

೧೭. ಸೇವೆ ಸಲ್ಲಿಸುವ ಸಂಸ್ಥೆಯ ಆಸ್ತಿ–ಪಾಸ್ತಿಗಳ ಧರ್ಮ ದರ್ಶಿಗಳಂತಿರಬೇಕು.

೧೮. ಯಾವ ಕಾರಣಕ್ಕೂ ತಾಳ್ಮೆಯನ್ನು ಕಳೆದುಕೊಳ್ಳ ಬಾರದು.

೧೯. ಮಕ್ಕಳಲ್ಲಿ ಮುಖ್ಯವಾಗಿ ರಾಷ್ಟ್ರೀಯ ದೃಷ್ಟಿ ಬೆಳೆಸಬೇಕು.

೨೦. ನಿತ್ಯವೂ ಆತ್ಮನಿರೀಕ್ಷೆ ಮಾಡಿಕೊಳ್ಳಬೇಕು.

ಈ ಅಂಶಗಳು ಕೇವಲ ಸಾಂಕೇತಿಕ. ನಿಮ್ಮ ಸೇವಾನುಭವವೇ ಮಾರ್ಗದರ್ಶಕ!

ಇನ್ನು ಕೊನೆಯ ಮಾತು: ನಾವೀಗ ನವಭಾರತ ನಿರ್ಮಾಣದ ಪ್ರಕ್ರಿಯೆಯಲ್ಲಿದ್ದೇವೆ. ಈ ಸಂದರ್ಭದಲ್ಲಿ ಶಿಕ್ಷಕರೆಲ್ಲ ಶುದ್ಧ ಸಂಕಲ್ಪ ಮಾಡಬೇಕು. ಭಾರತೀಯರೆಲ್ಲ ಒಂದು ಭೌಗೋಳಿಕ ನೆಲೆಯಲ್ಲಿ ಸ್ವಾಭಿಮಾನಿಗಳಾಗಿ, ಸ್ವಾವಲಂಬಿಗಳಾಗಿ, ಸಮೃದ್ಧ ಮತ್ತು ನೆಮ್ಮದಿಯ ರಾಷ್ಟ್ರವನ್ನಾಗಿ ಮಾಡಬೇಕೆಂದು ಹಂಬಲಿಸಿದ್ದ ಸ್ವಾತಂತ್ರ್ಯ ಹೋರಾಟಗಾರರ ಆಶಯವನ್ನು ಈಡೇರಿಸಲು ದೃಢ ನಿರ್ಧಾರ ಮಾಡಬೇಕು. ಕೇವಲ ಸಂಕಲ್ಪ ಮಾಡಿದರಷ್ಟೆ ಸಾಲದು; ಸಕ್ರಿಯ ಪ್ರಯತ್ನವನ್ನೂ ಮಾಡಬೇಕು. ಇಲ್ಲವಾದರೆ ನಮ್ಮ ದೇಶವನ್ನು ಬಹುದೊಡ್ಡ ಆಪತ್ತಿಗೆ ಸಿಕ್ಕಿಸಿದ ಅಪರಾಧ, ಅಪಕೀರ್ತಿ ನಮ್ಮದಾಗುತ್ತದೆ. ಅಂತಹ ಚಿಂತನೆಗೆ, ಕ್ರಿಯಾಶೀಲತೆಗೆ ನಾನು ಇಲ್ಲಿ ಹಂಚಿ ಕೊಂಡಿರುವ ವಿಚಾರಗಳು ಪ್ರೇರಕವಾಗಬೇಕು. ನಮಗೆ ಮುಕ್ತ ಮನಸ್ಸಿದ್ದರೆ ಅದು ಸಾಧ್ಯ. 'ಸಂಶಯದ ಸಂತೆಯಲ್ಲಿ ಸರಕು ಹುಡುಕಿದರೆ ಅದು ಸಿಗುವುದಿಲ್ಲ. ಅನುಮಾನದ ಅಂಗಡಿಯಲ್ಲಿ ಅಭಿಮಾನದ ಸ್ವಭಾವ ಸಿಕ್ಕಲಾರದು'. ಬೇಕಾಗಿರುವುದು ನಾನು ಮೊದಲೇ ಹೇಳಿದಂತೆ ದೃಢ ಸಂಕಲ್ಪ ಮತ್ತು ಪ್ರಯತ್ನಶೀಲತೆ.

ನಾನು ಇದುವರೆಗೆ ಹೇಳಿದ ಮಾತುಗಳು 'ಕೊಳಲ ಮೇಲೆ ಸುಳಿದ ಗಾಳಿಯಂತಾಗಬಾರದು. ಕೊಳಲ ಒಳಗೆ ಇಳಿದು ಮಧುರ ದನಿಯಾಗಿ ಹೊಮ್ಮಬೇಕು'. ಅದು ನನ್ನ ಬಿನ್ನಹ.

❑

### ಶ್ರೀವಾಣಿ

ಸರ್ಕಾರದ ವಾಹನಗಳು, ಸರ್ಕಾರದ ಇಂಧನ ಯಥೇಚ್ಛವಾಗಿ ಖರ್ಚಾಗುತ್ತಿದೆ. ಇಂದು ಅಧಿಕಾರಿಗಳು, ರಾಜಕಾರಣಿಗಳು ತಮ್ಮ ಸ್ವಂತ ಕೆಲಸಕ್ಕೂ ಸರ್ಕಾರದ ವಾಹನ ಉಪಯೋಗಿಸುತ್ತಿರುವುದು ದುರದೃಷ್ಟಕರ. ಹಿಂದೆ ಎಂಥ ಪ್ರಾಮಾಣಿಕತೆ ಇತ್ತು, ಎಂಥ ಕರ್ತವ್ಯ ಪ್ರಜ್ಞೆ ಇತ್ತು; ಎಂಥ ರಾಷ್ಟ್ರಪ್ರೇಮ ಇತ್ತು ಎಂಬ ವಿಚಾರವನ್ನು ಪ್ರತಿಯೊಬ್ಬರೂ ಅರ್ಥಮಾಡಿಕೊಳ್ಳಬೇಕು. ಇದೆಲ್ಲವನ್ನು ಚಾಣಕ್ಯನನ್ನು ನೋಡಿ ಕಲಿಯಬೇಕು. ಅವನು ಇಡೀ ರಾಷ್ಟ್ರಕ್ಕೆ ಮಾದರಿಯಾಗಿದ್ದನು. ಅವನು ಒಂದು ಸಾಧಾರಣ ಮನೆಯಲ್ಲಿ ವಾಸಮಾಡುತ್ತಿದ್ದ. ಚಾಪೆ ಬಿಟ್ಟರೆ ಮತ್ತೊಂದಿರಲಿಲ್ಲ. ಅವನು ಎಷ್ಟರ ಮಟ್ಟಿಗೆ ಆಳ್ವಿಕೆ ಮಾಡುತ್ತಾ ಇದ್ದ; ಎಷ್ಟು ವಿಚಾರವಂತನಾಗಿದ್ದ, ಪ್ರಜ್ಞಾವಂತನಾಗಿದ್ದ, ಪ್ರಾಮಾಣಿಕನಾಗಿದ್ದ, ಎಷ್ಟು ಸರಳ ಜೀವನ ನಡೆಸುತ್ತಿದ್ದ ಎಂಬುದನ್ನು ತಿಳಿದು ನಡೆಯಬೇಕು.





# ಮಹಾತ್ಮರಂ ನೆನೆವುದೇ ಘನಮುಕ್ತಿ

(ಮುಂದುವರಿದ ಭಾಗ)

– ಹೆಚ್. ಗಂಗಾಧರನ್ *

ಉಕ್ಕಲಗೆರೆ ಅಪ್ಪಟ ಕೃಷಿಕಾಯಕ ಸದ್ಭಾವಿಗಳಿಂದ ತುಂಬಿದ ಊರು. ವೀರಶೈವ ಸಂಸ್ಕೃತಿಯಲ್ಲಿ ಬಾಳುವ ಜನರೇ ಅಲ್ಲಿ ಹೆಚ್ಚು. ವೀರಶೈವ ಊರೆಂದರೆ ವಾಡಿಕೆಯಂತೆ ಒಂದು ಮಠ ಇರಲೇ ಬೇಕು. ಅದೇ 'ಬೆಟ್ಟದ ಮಠ'ವೆಂದು ಸುತ್ತಮುತ್ತ ಪ್ರಖ್ಯಾತವಾಗಿದ್ದ ಕೃಷಿಕಾಯಕ ಸದ್ಭಾವಿಗಳಾದ ಲಿಂಗಪ್ಪ–ಲಿಂಗಮ್ಮ ಎಂಬ ಶರಣ ದಂಪತಿಗಳ ಮಠ.

"ಮನೆ ನೋಡಾ ಬಡವರು ಮನ ನೋಡಾ ಸಂಪನ್ನರು ಧನ ನೋಡಾ ಬಡವರು ಘನಮನ ಸಂಪನ್ನರು....." ಎಂಬ ಬಸವಣ್ಣನವರ ನುಡಿ ಈ ಶರಣ ದಂಪತಿಗಳಿಗೆ ಪೂರ್ಣ ಅನ್ವಯವಾಗುವಂತಿತ್ತು. ಇದು ಉತ್ಪ್ರೇಕ್ಷೆಯೆಂದು ಬಗೆಯಲಾಗದು. ಇಂದಿಗೂ ಈ ಪುಣ್ಯದಂಪತಿಗಳ ಆದರ್ಶವನ್ನು ಅಲ್ಲಿನ ಜನತೆ ತಮ್ಮ ಆದರ್ಶವನ್ನಾಗಿಸಿಕೊಳ್ಳುತ್ತಿರುವುದನ್ನೂ ಕಾಣುತ್ತೇವೆ. ಈ ದಂಪತಿಗಳ ಗುರು ಲಿಂಗ–ಜಂಗಮ ಸೇವಾ ಧುರೀಣತೆ, ದಾಸೋಹ–ಸದ್ಭಾವ, ಕಾಯಕನಿಷ್ಠೆ, ಭಕ್ತಿಜ್ಞಾನ ವೈರಾಗ್ಯ ಸಂಪನ್ನತೆ–ಇವು ಇಂದಿಗೂ ಅಲ್ಲಿನ ಜನರ ಮನೆಮಾತು. ಇಂಥ ಪುಣ್ಯದಂಪತಿಗಳ ಸದಾಚಾರ ಸದ್ಭಾವ ಸಂಪತ್ತೇ ಶ್ರೇಷ್ಠ ಸಂತಾನ ಸಂಪದಕ್ಕೆ ಕಾರಣವಾಗುವುದೆಂಬ ಆರ್ಷೇಯ ನಂಬಿಕೆಯನ್ನು ಅಲ್ಲಗಳೆಯಲಾಗುವುದೇ ಇಲ್ಲ. ಲಿಂಗಪ್ಪ–ಲಿಂಗಮ್ಮ ದಂಪತಿಗಳ ದೀರ್ಘಕಾಲದ ಲಿಂಗ ತಪಸ್ಸಿನ ಫಲವೇ ಜ್ಯೋತಿಯಾಗಿ ಬೆಳಗಿದಂತೆ ಭಕ್ತಿ, ಜ್ಞಾನ, ವೈರಾಗ್ಯಗಳೇ ಮೂರ್ತಿವೆತ್ತಂತೆ ಸತ್ಕ್ರಿಯಾಚಾರವೇ ದೇಹಗೊಂಡೈತಂದಂತೆ. ದಾಸೋಹಂಭಾವವೇ ಪ್ರಸಾದ ಪ್ರಸನ್ನ ಪರಿಣಾಮುವೆನಿಸಿ ಮೈಗಾಣಿಸಿಗೊಂಡಂತೆ ಅವರು ಪುತ್ರರತ್ನವೊಂದಕ್ಕೆ ಜನ್ಮವಿತ್ತರು. ಅದು ಪುತ್ರರತ್ನ ಅಷ್ಟೇ ಅಲ್ಲ, ಶಿವತೇಜದ ಒಂದು ಕಿಡಿ. ಕೂಸಿನ ಹೆಸರು ಶಂಕರ; ಅದೇ ಮುಂದೆ ಗೌರೀಶಂಕರ, ಈ ಗ್ರಂಥದ ನಾಯಕರತ್ನ. ಸುಂದರವಾದ ತುಂಬುದೇಹ, ಹೊಳೆಯುವ ನೇತ್ರದ್ವಯ, ಚಂದ್ರನಂತಹ ಮುಖಮಂಡಲ ನೋಡಿದವರ ದೃಷ್ಟಿಯನ್ನು ಸೆರೆಗೆಯ್ಯುವ ಅಂಗಾಂಗಗಳಿಂದ ದಿನೇ ದಿನೇ ಶಂಕರ ಮಾತಾಪಿತೃಗಳ ಅಪರಿಮಿತ ವಾತ್ಸಲ್ಯದ ತೋಳ್ತೆಕ್ಕೆಯಲ್ಲಿ ಬೆಳೆಯತೊಡಗಿದ.

ಮುಂದೆ ಶಂಕರರು ಸುಬ್ಬಣ್ಣ, ಶಿವಪ್ಪ ಎಂಬೀರ್ವರು ಸಹೋದರರನ್ನು, ಲಿಂಗಮ್ಮ ಎಂಬ ಸಹೋದರಿಯನ್ನು ಪಡೆದು ತನ್ನ ಬಾಲಲೀಲಾ ವಿನೋದವನ್ನು ತಮ್ಮ ಮನೆಯಲ್ಲಿ ನಟಿಸಿದ. ಎಂಟು ವರ್ಷ ತುಂಬುವದರೊಳಗಾಗಿ ಶಂಕರ ತೋರಿಸುತ್ತಿದ್ದ ಅಲೋಕ ಸಾಮಾನ್ಯ ಪ್ರತಿಭೆ ಮಾತಾಪಿತೃಗಳನ್ನೂ, ಊರ ಜನರನ್ನು ಅಚ್ಚರಿಗೊಳಿಸತೊಡಗಿತು. ಮಾತಾಪಿತೃಗಳಿಗೂ ಊರ ಜನಕ್ಕೂ ಅರಿಯದಾಯ್ತು. ಅವನ ಅಲೌಕಿಕ ನಡೆ–ನುಡಿ, ಮತ್ತು ವ್ಯಕ್ತಿತ್ವದ ಹಿರಿಮೆ, ಎಂಟನೆಯ ವರ್ಷದಲ್ಲಿಯೇ ಅಪರಿಮಿತ ಪ್ರಪೂರ್ಣ ಕಾಂತಿಯೊಡಲಿನಿಂದ ಕಂಗೊಳಿಸುತ್ತಿದ್ದ ಶಂಕರ ನೋಡುವವರ ದೃಷ್ಟಿಯನ್ನು ಸೆರೆಗೈಯ್ಯುತ್ತಿದ್ದ. ಸದಾ ಮೌನ ಭಾವ, ಆಗಾಗ ಪ್ರಕಟಿಸುತ್ತಿದ್ದ ಕಿರುನಗೆ, ಯಾವ ಆಟ ಪಾಟವಾಡುತ್ತಿದ್ದರೂ ಎಲ್ಲಿಯೋ ದೃಷ್ಟಿ, ಏನೇನೋ ಯೋಚನೆ. ಇದು ಶಂಕರನ ಸಾಮಾನ್ಯ ಚರ್ಯೆ. ದಿನಾಲು ಹೊಳೆಗೆ ಹೋಗಿ ಸ್ನಾನ ಮಾಡಿ ಬಂದು ತಂದೆ ತಾಯಿಯೆದುರು ಕುಳಿತು ಮೈಗೆಲ್ಲಾ ಭಸ್ಮ ಧರಿಸಿ ಶಿವಪೂಜೆಗೆ ಕುಳಿತನೆಂದರೆ ನೋಡಬೇಕು ಅವನ ಆಗಿನ ಸುಂದರ ಮಂಗಳ ವಿಗ್ರಹವನ್ನು, ಸಾಕ್ಷಾತ್ ಬಾಲ ಬಸವನೇ. ಶಿವಪೂಜೆ ಪ್ರಸಾದಗಳು ಮುಗಿದೊಡನೆ ಓರ್ವನೇ ತಮ್ಮ ಹೊಲಗದ್ದೆಗಳಿಗೂ, ಕಪಿಲಾ–ಕಾವೇರಿ ಸಂಗಮ ಸ್ಥಾನಕ್ಕೂ ಹೋಗಿ ಮನಬಂದಂತೆ ತಿರುಗಾಡುತ್ತಿದ್ದ. ಅಲ್ಲಿನ ಸುಂದರ ಪ್ರಕೃತಿ ಸನ್ನಿವೇಶ ಶಂಕರನ ತನುಮನ ಭಾವಗಳನ್ನು ಸೂರೆಗೊಳಿಸುತ್ತಿತ್ತು. ತಿರುಗಾಟ ಸಾಕಾದಾಗ ಮರದ ನೆರಳಿನಲ್ಲಿ ಕುಳಿತು

* ಹಿರಿಯ ನ್ಯಾಯವಾದಿಗಳು, ಮೈಸೂರು.

ಏನೇನೋ ವೀಕ್ಷಣೆ. ನೂರಾರು ಭಾವಗಳ ತಾಕಲಾಟದಲ್ಲಿ ಏನೇನೋ ಯೋಚಿಸುತ್ತಾ ಕುಳಿತಿರುತ್ತಿದ್ದ ಶಂಕರನ ಚರ್ಯೆ ಪ್ರಕೃತಿಯೊಡನೆ ಹೊಂದುತ್ತಿದ್ದ ತಾದಾತ್ಮ್ಯವೆಂದು ಗುರುತಿಸತೊಡಗಿದರು. ಇಂಥ ಬಾಲಕನಿಗೆ ಯೋಗ್ಯ ಶಿಕ್ಷಣ ಕೊಡಿಸಬೇಕೆಂಬುದು ಊರವರ ಒತ್ತಾಯ ಮತ್ತು ತಂದೆ ತಾಯಿಗಳ ಇಚ್ಛೆ ಯಾಗಿದ್ದರೂ, ಪ್ರತಿಕೂಲ ಸನ್ನಿವೇಶಗಳಿಂದ ಎಂಟು ವರ್ಷಗಳವರೆಗೆ ಅವನಿಗೆ ಶಿಕ್ಷಣ ಕೊಡಿಸಲಾಗಲಿಲ್ಲ, ಹಾಗೂ ಹೀಗೂ ಊರ ಕೂಲಿ ಮಠದಲ್ಲಿ ಅಕ್ಷರಾಭ್ಯಾಸ ಮಾಡಿದ. ಓದು ಬರಹ ಮೈಗೂಡಿತು.

ಒಂದು ದೃಷ್ಟಿಯಿಂದ ಬಾಲ್ಯದಲ್ಲಿಯೇ ಸಂಗ ವಿರಹಿತನ ಭಾವದಲ್ಲಿ ಸದಾ 'ಆತ್ಮನ್ಯೇನಾತ್ಮನಾ ತುಷ್ಟ' ಎಂಬಂತೆ ಲೋಕದ ಕಣ್ಣಿಗೆ ಕಾಣುತ್ತಿದ್ದ ಶಂಕರನನ್ನು ಯಾವುದಾದರೂ ಮಠಕ್ಕೆ ಮರಿಯನ್ನಾಗಿ ಮಾಡಿಬಿಡಬೇಕೆಂದು ಕಂಡವರೆಲ್ಲಾ ಆಡುವಂತಾಗಿತ್ತು. ಮಾತಾ ಪಿತೃಗಳಿಗೂ ಕೂಡ ಇವನ ಮೌನಭಾವ ಬಾಲೋಚಿತ ಆಟಗಳಿಂದ ದೂರವಿರುವಿಕೆ, ಎಲ್ಲಲ್ಲಿಯೂ ತೃಪ್ತಿಯ ಮನೋಭಾವ, ಸದಾ ಕಿರುನಗೆ ಯಿಂದಲೇ ವ್ಯಕ್ತಪಡಿಸುತ್ತಿದ್ದ ಸಮ್ಮತಿ ಒಂದೊಂದು ಲೋಕ ಲೌಕಿಕ ಭಿನ್ನವಾಗಿ ಕಾಣುತ್ತಿದ್ದವು. ಇವನನ್ನು ಕಂಡು ತಂದೆ ತಾಯಿಯರಿಗೂ ತಾವು ಪುರಾಣ, ಪ್ರವಚನಗಳಲ್ಲಿ ಕೇಳುತ್ತಿದ್ದ ಸಿದ್ಧರಾಮನ ಬಾಲ್ಯ ಜೀವನವನ್ನು ಜ್ಞಾಪಕಕ್ಕೆ ತರುತ್ತಿತ್ತು. ಇದು ನಮಗೆ ದಕ್ಕುವ ಫಲವಲ್ಲವೆಂಬುದನ್ನು ತಂದೆ ಲಿಂಗಪ್ಪ ಬಹು ಬೇಗ ಗುರುತಿಸಿಕೊಂಡುಬಿಟ್ಟ, ಆದರೆ ಈ ಭಾವನೆ ಬಂದೊಡನೆ ಅವನ ಅಂತರಂಗ ಕರಗಿ ನೀರಾಗಿ ಬಿಡುತ್ತಿತ್ತು. ಈ ಮಗನಿಗೆ ಏನಾದರೂ ಮಾಡಿ ವಿದ್ಯಾಭ್ಯಾಸ ಮಾಡಿಸಲೇ ಬೇಕೆಂದು ಮಾಡಿದ ಮಾತಾ ಪಿತೃಗಳ ಸಂಕಲ್ಪ ಮತ್ತು ಊರವರ ಒತ್ತಾಯಗಳ ಫಲವಾಗಿ ಶಂಕರ ತಮ್ಮ ಒಬ್ಬ ಆಪ್ತ ಬಂಧುಗಳ ಸಹಾಯದಿಂದ ಮೈಸೂರಿಗೆ ಎಂಟನೆಯ ವಯಸ್ಸಿನಲ್ಲಿಯೇ ಬಂದು ಅಲ್ಲಿ ವಿದ್ಯಾಭ್ಯಾಸಕ್ಕೆ ಮೊದಲು ಮಾಡಿದ್ದೊಂದು ಯೋಗಾ ಯೋಗವೆನ್ನ ಬಹುದು. ಆ ಸನ್ಮುಹೂರ್ತವೇ ಶಂಕರ ಗೌರೀಶಂಕರನಾಗಿ ಬೆಳೆಯುವ ಸೌಭಾಗ್ಯವನ್ನುಂಟು ಮಾಡಿತು. ಮೈಸೂರು ನಗರದ ಹೊಸ ಸನ್ನಿವೇಶಕ್ಕೆ, ಕಟ್ಟುನಿಟ್ಟಿನ ವಿದ್ಯಾಭ್ಯಾಸದ ವಿಧಿ ವಿಧಾನಗಳಿಗೆ ಹೊಂದಿಕೊಳ್ಳುವುದು ಶಂಕರನಿಗೆ ಮೊದಮೊದಲು ಸ್ವಲ್ಪ ತೊಡಕಿನದೆನಿಸಿದರೂ, ಅವನ ಅಗಾಧ ತಾಳ್ಮೆ, ಯಾರೊಬ್ಬರ ದೃಷ್ಟಿಯನ್ನು ಥಟ್ಟನೇ ಸೆರೆಗೈಯ್ಯುವಂತಿದ್ದ ಮುಖಭಾವ, ಸಹಜ ಶಾಂತ ಸ್ವಭಾವಗಳು ಮತ್ತು ಈ ಗುಣಗಳಿಗೆಲ್ಲ ಒಪ್ಪವಿಟ್ಟಂತಿದ್ದ ಅವನ ಸುಪ್ತ ಅಲೌಕಿಕ ಪ್ರತಿಭೆ, ಶ್ರದ್ಧಾಧಿ ಗುಣಗಳು ಕೆಲವೇ ದಿನಗಳಲ್ಲಿ ಬಹುಜನ ಬಾಂಧವ್ಯವನ್ನು ಮೈಸೂರಿನಲ್ಲಿ ಉಂಟುಮಾಡಿದವು. ಆಗ ಅಲ್ಲಿದ್ದ ಅನೇಕ ಜನ ವೀರಶೈವ ಗಣ್ಯಪುರುಷರ ದೃಷ್ಟಿಗೂ ಶಂಕರ ಬಿದ್ದ. ಇದೆಲ್ಲದರ ಫಲವಾಗಿ ನಿರ್ಭಾದಿತವಾಗಿ ಶಂಕರನ ಸಂಸ್ಕೃತ ಮತ್ತು ಕನ್ನಡ ವಿದ್ಯಾಭ್ಯಾಸಗಳು ನಡೆಯತೊಡಗಿದವು.

ಬೆರಳು ತೋರಿಸಿದರೆ ಸಾಕು ಹಸ್ತವನ್ನೇ ನುಂಗೆನ್ನು ವಂತೆ ವಿದ್ಯಾಭ್ಯಾಸದಲ್ಲಿ ಶಂಕರ ತೋರಿಸುತ್ತಿದ್ದ ರೀತಿಗೆ ಉಪಾಧ್ಯಾಯ ವೃಂದವೇ ದಂಗುಬಡಿಯಲಾರಂಭಿಸಿತು. ಅಗಾಧ ಸ್ಮೃತಿಶಕ್ತಿಯಿಂದ ಒಮ್ಮೆ ಹೇಳಿದುದನ್ನು ಆ ಕೂಡಲೇ ಒಪ್ಪಿಸುವ ಶಂಕರನ ಈ ಅಲೌಕಿಕ ಪ್ರತಿಭೆ ಮಾನವ ಸಾಮಾನ್ಯವಲ್ಲ, ಈಶ್ವರದತ್ತವಾದ ಸಹಜ ಶಕ್ತಿಯೆಂಬುದನ್ನು ಅರಿತುಕೊಳ್ಳಲು ಉಪಾಧ್ಯಾಯರಿಗೆ ಹೆಚ್ಚು ಕಾಲ ಬೇಕಾಗಲಿಲ್ಲ. ಹೀಗಾಗಿ ಶಂಕರ ಉಪಾಧ್ಯಾಯರ ಅತ್ಯಂತ ಮಮತೆಯ, ವಾತ್ಸಲ್ಯದ ವಿದ್ಯಾರ್ಥಿಯಾಗಿಬಿಟ್ಟ, ಇವನು ಅಗಾಧ ವಿದ್ವಾಂಸ ನಾಗುತ್ತಾನೆಂದು ಮೊದಲು ಕಂಡುಕೊಂಡವರು ಬಸವರಾಜ ಶಾಸ್ತ್ರಿಗಳೆಂಬ ಹೆಸರಿನ ಓರ್ವ ಉಪಾಧ್ಯಾಯರು. ಅವರು ಶಂಕರನಿಗೆ ಸರ್ವ ಸೌಲಭ್ಯಗಳ ಸನ್ನಿವೇಶವನ್ನೇ ಕಲ್ಪಿಸಿಕೊಟ್ಟು ಪ್ರೋತ್ಸಾಹಿಸ ತೊಡಗಿದರು. ನಾಲ್ಕು ವರ್ಷಗಳಲ್ಲಿ ಶಂಕರ ಹತ್ತಾರು ವರ್ಷಗಳಲ್ಲಿ ಗಳಿಸಬೇಕಾದ ವಿದ್ಯಾಸಂಪತ್ತನ್ನು ಗಳಿಸಿದುದು ಎಲ್ಲರನ್ನು ದಂಗುಬಡಿಸಿತು. ಈಗ ೧೨ ವರ್ಷ ತುಂಬಿದ ಶಂಕರ ಮೈಸೂರಿನ ವೀರಶೈವ ಸಮಾಜದ ಗಣ್ಯರ ದೃಷ್ಟಿಗೆ ಬಿದ್ದ. ಉಪಾಧ್ಯಾಯ ವರ್ಗದವರ ಅಭಿಮಾನಕ್ಕೆ ಪಾತ್ರನಾದ. ಸಂಸ್ಕೃತದ ಪ್ರೌಢಗ್ರಂಥಗಳನ್ನೂ ವ್ಯಾಖ್ಯಾನಾದಿ ಗಳನ್ನೂ ಸ್ವತಃ ಓದಿ ಅರ್ಥ ಮಾಡಿಕೊಳ್ಳುವ ಮಟ್ಟಕ್ಕೇರಿದುದು ಸಾಮಾನ್ಯ ವಿಷಯವಲ್ಲ. ಕಾರ್ಯಸಿದ್ಧಿ, ಪದವಾಕ್ಯ ಪ್ರಮಾಣಿಜ್ಞತೆಗಳು ಸಹಜವಾಗಿ ಇವನಿಗೆ ಮೈಗೂಡ ತೊಡಗಿದ್ದನ್ನು ಕಂಡು ಉಪಾಧ್ಯಾಯರು ಬೆಕ್ಕಸಬೆರಗಾದರು. ಶಂಕರನಲ್ಲಿ ಶಿವಪ್ರಸಾದಜನ್ಯ ಪ್ರತಿಭಾ ವಿಶೇಷದ ಮೊಗ್ಗು ಬಿರಿತು ತನ್ನ ಸಹಜ ಸೌರಭವನ್ನು ಎತ್ತೆತ್ತಲೂ ಬೀರತೊಡಗಿತು. ಮಾರಾರಿಯ ಕೃಪೆಯಿಲ್ಲದವರಿಗೆ ಕಾವ್ಯಸಿದ್ಧಿಯಾಗಲಿ.





ಪದವಾಕ್ಯ ಪ್ರಮಾಣಜ್ಞತೆ ಯಾಗಲಿ ಸಿದ್ಧಿಯಾಗುವುದಿಲ್ಲವೆಂಬು ದೊಂದು ಆರ್ಷೇಯ ನಂಬಿಕೆ ವಿದ್ವಾಂಸರಲ್ಲಿದೆ. ಈ ನಂಬಿಕೆಗೆ ಶಂಕರ ಸಂಪೂರ್ಣ ಲಕ್ಷ್ಮವೆನಿಸಿ ಮೈಸೂರಿನ ಮನೆಮಾತಾದ ಸಮಾಜ ಗಣ್ಯರ ಅಭಿಮಾನಕ್ಕೆ ಪಾತ್ರನಾದ; ಉಪಾಧ್ಯಾಯ ವರ್ಗದವರ ಅಚ್ಚರಿಯ ವಸ್ತುವಿಶೇಷವಾದ.

### *ಮೈಸೂರಿನ ಅರಮನೆ ಪಂಚಗವಿಮಠ*

ಮೈಸೂರು ಅರಸರು ಪ್ರಾಯಶಃ ತತ್ತ್ವಶಾಸ್ತ್ರದಲ್ಲಿ. ಗುರು-ಲಿಂಗ-ಜಂಗಮದಲ್ಲಿ ಅಪಾರ ವಿಶ್ವಾಸಗಳನ್ನು ಹಿಂದಿನಿಂದಲೂ ತೋರಿಸುತ್ತಾ ಬಂದಿರುವುದನ್ನು ಚರಿತ್ರೆ ಯುದ್ದಕ್ಕೂ ಕಾಣುತ್ತೇವೆ. ಅರಮನೆಯ ಅನೇಕ ಕೆಲಸ ಕಾರ್ಯಗಳಲ್ಲಿ ವೀರಶೈವರ ಪಾತ್ರ ವಿಶೇಷವಾಗಿರುವುದನ್ನು ಕೊನೆಯ ಅರಸರಾಗಿದ್ದ ಶ್ರೀ ಮಜ್ಜಯಚಾಮ ರಾಜೇಂದ್ರ ಒಡೆಯರ ಕಾಲದವರೆಗೂ ಕಾಣುತ್ತೇವೆ. ಒಮ್ಮೆ ರಾಜ ರೊಬ್ಬರಿಗೆ ತಲೆದೋರಿದ ವ್ಯಾಧಿಯು ಚಾಮುಂಡಿ ಬೆಟ್ಟದ ಪಶ್ಚಿಮದಿಗ್ಭಾಗದ ತಪ್ಪಲಿನ ಗವಿಯಲ್ಲಿ ತಪೋನು ಷ್ಠಾನ ನಿರತರಾಗಿದ್ದ ಶ್ರೀ ಶಿವಬಸವಸ್ವಾಮಿಗಳೆಂಬ ಜಂಗಮ ಪುಂಗವರ ಕೃಪಾಶೀರ್ವಾದ ಫಲವಾಗಿ ಗುಣವಾಯಿತು. ಮಹಾರಾಜರು ಗುಣವಾದ ಮೇಲೆ ಶ್ರೀಗಳವರಿದ್ದ ಗವಿಗೆ ಪರಿವಾರ ಸಮೇತವಾಗಿ ಆಗಮಿಸಿ "ಸನ್ನಿಧಿಯವರಿಗೆ ನನ್ನಿಂದ ಏನು ಸೇವೆಯಾಗಬೇಕೆಂಬುದನ್ನು ಅಪ್ಪಣೆಕೊಡಿಸ ಬೇಕೆಂದು ಪ್ರಾರ್ಥಿಸಿದರು. ಶ್ರೀಗಳವರು ನಮಗೆ ಇಲ್ಲಿ ಶಿವನ ಕೃಪೆಯಿಂದ ಎಲ್ಲಾ ಸಮೃದ್ಧಿಯೂ ಇದೆ. ಬೆಟ್ಟದ ನೆತ್ತಿಯಿಂದ ಹರಿದು ಬರುವ ಈ ಗಿರಿನಿರ್ಝರ, ಶಿವನೇ ನಿರ್ಮಿಸಿಕೊಟ್ಟಿರುವ ಸಹಜ ಗೃಹಗಳಂತಿರುವ ಗವಿಗಳು, ಈ ಪ್ರಕೃತಿಯ ರಮ್ಯ ಶಿವಸಂಪತ್ತು, ಈ ಗಿಡಮರಗಳು ಅಲ್ಲಿರುವ ಪಕ್ಷಿ ವಿಶೇಷಗಳ ಕಲಕೂಜನ, ಸ್ವೇಚ್ಛೆಯಾಗಿ ಸ್ನೇಹಭಾವದಿಂದ ತಿರುಗಾಡುವ ವನ್ಯಮೃಗ ಸಂಪತ್ತು, ಇದಕ್ಕಿಂತ ಬೇರೆ ಸಂಪತ್ತಿನ ಅವಶ್ಯಕತೆ ಯಾದರೂ ನಮಗೇನಿದೆ? ಇಗೋ ಇಲ್ಲಿ ಹತ್ತಾರು ಜನ ವಿದ್ಯಾರ್ಥಿಗಳು ಶಿವಯೋಗಾನುಷ್ಠಾನ ಮಾಡುತ್ತಿದ್ದಾರೆ. ನಿಜಗುಣ ಷಟ್‌ಶಾಸ್ತ್ರ ಅಧ್ಯಯನ ಮಾಡುತ್ತಿದ್ದಾರೆ. ನಗರದ ಭಕ್ತ ಕುಟುಂಬಗಳು ಇವರೆಲ್ಲರ ಯೋಗಕ್ಷೇಮದ ಹೊಣೆ ಹೊತ್ತಿದ್ದಾರೆ" ಇತ್ಯಾದಿಯಾಗಿ ಹೇಳಿದ ತಮ್ಮ ವೈರಾಗ್ಯ ಸಹಜ, ಸ್ವಭಾವ ಸುಂದರ ಮಾತುಗಳಿಂದ ಕರಗಿಹೋದ ರಾಜರು "ಸ್ವಾಮಿ ನನ್ನ ಒಂದು ಬಯಕೆಯನ್ನೀಡೇರಿಸಿ ಕೊಡಬೇಕು. ಈ ಘೋರಾರಣ್ಯಮಧ್ಯದಲ್ಲಿ ಒಂದು ಸುಂದರ ಮಠವನ್ನು ನಿರ್ಮಿಸಿ ತಮಗೆ ಅರ್ಪಿಸುತ್ತೇವೆ. ಅಲ್ಲಿ ಶಿವಯೋಗ ಲೀಲೆಯಿಂದ ಇದ್ದು ನಮ್ಮ ರಾಜಮನೆತನ ವನ್ನು ಆಶೀರ್ವಾದ ಮಾಡುತ್ತಿರಬೇಕೆಂಬುದೇ ನನ್ನ ಬಯಕೆ. ನಿಮ್ಮ ಶಿಷ್ಯಜನ ಸಮೂಹದ ವಾಸಕ್ಕೂ ಅನುಕೂಲವಾಗು ವುದು" ಎಂದು ಹೇಳಿದ ರಾಜರ ಮಾತಿಗೆ ಶಿವಬಸವ ಶಿವಯೋಗಿಗಳು ನಕ್ಕು ಸುಮ್ಮನಾದರು. ಈ ಶಿವಬಸವ ಸ್ವಾಮಿಗಳೇ ಈ ಮಠದ ಮೂಲ ಪುರುಷರು.

ಮಹಾರಾಜರು ಆ ದಿನದಿಂದಲೇ ಕಾರ್ಯಪ್ರವೃತ್ತ ರಾಗಿ ಅಲ್ಲಿರುವ ಐದು ಸಹಜ ಗುಹೆಗಳನ್ನೊಳಗೊಂಡಂತೆ ವಿಶಾಲವಾದ ಮಠವನ್ನು ನಿರ್ಮಿಸಿದರು. ಈ ಐದು ಗುಹೆಗಳನ್ನೊಳಗೊಂಡ ಮಠವಾದ್ದರಿಂದ ಪಂಚಗವಿಮಠ ವೆಂದೂ, ಮೈಸೂರರಮನೆಯವರು ಕಟ್ಟಿಸಿದ್ದರಿಂದ "ಅರಮನೆಯ ಪಂಚಗವಿಮಠ" ವೆಂದೂ ಆ ಮಠಕ್ಕೆ ಹೆಸರಾಯಿತು. ಮುಂದೆ ಆ ಮಠದ ಪರಂಪರೆಯಲ್ಲಿ ಅನೇಕ ಜನ ಶಿವಯೋಗಿಗಳು ಆಗಿ ಹೋದರು. ಬೆಂಗಳೂರಿನ ಪ್ರಸಿದ್ಧ ಶಿವಯೋಗಿ ಪುಂಗವ ಸರ್ಪ ಭೂಷಣರ ಗುರುಗಳಾದ ಗುರುಸಿದ್ಧ ಸ್ವಾಮಿಗಳವರು ಈ ಅರಮನೆ ಪಂಚಗವಿಮಠದ ಮಹಾಲಿಂಗ ಶಿವಯೋಗಿಗಳವರಲ್ಲಿ ನಿಜಗುಣರ ಷಟ್‌ಶಾಸ್ತ್ರಾಭ್ಯಾಸ ಮಾಡುತ್ತಾ ಅವರ ಸೇವೆ ಮಾಡುವ ಓರ್ವವಟುವೇ ಆಗಿದ್ದರೆಂಬುದು ಬಹುಜನಕ್ಕೆ ಗೊತ್ತಿರಲಿಕ್ಕಿಲ್ಲ. ಈ ಗುರುಸಿದ್ಧಸ್ವಾಮಿಗಳವರನ್ನು ಬೆಂಗಳೂರಿನ ತಿಪ್ಪಶೆಟ್ಟ ರೆಂಬುವರು ತಾವು ಕಟ್ಟಿಸಿದ ಮಠಕ್ಕೆ ಓರ್ವ ಚರಮೂರ್ತಿಗಳಾಗಿ ಕರೆತಂದು ಪ್ರತಿಷ್ಠಾಪಿಸಿ ಕೃತಾರ್ಥರಾದರು. ಈ ಗುರುಸಿದ್ಧ ಸ್ವಾಮಿಗಳವರ ಸೇವೆಯಲ್ಲಿದ್ದು ಅವರಿಂದ ನಿಜಗುಣರ ಷಟ್‌ಶಾಸ್ತ್ರಾಭ್ಯಾಸ ಮಾಡಿ, ಸಂಸ್ಕೃತಾಧ್ಯಯನ ಮಾಡಿ ಮುಂದೆ ಸರ್ಪಭೂಷಣ ಶಿವಯೋಗೀಶ್ವರ ಮಠವನ್ನು ಕಟ್ಟಿಸಿಕೊಂಡು ಸ್ವತಂತ್ರವಾಗಿದ್ದ ಚರಮೂರ್ತಿ ಗಳೇ ಸುಪ್ರಸಿದ್ಧ ವಾಗ್ಗೇಯಕಾರರೂ ಕೈವಲ್ಯ ಕಲ್ಪವಲ್ಲರಿ ಯೆಂಬ ಗ್ರಂಥವನ್ನು ಕನ್ನಡದಲ್ಲೂ ಜ್ಞಾನಶತಕವನ್ನು ಸಂಸ್ಕೃತದಲ್ಲೂ ರಚಿಸಿದ ಮಹಾಶಿವಯೋಗಿಗಳಾದ ಸರ್ಪಭೂಷಣರು ಅಥವಾ ಸಪ್ಪಣ್ಣಪ್ಪನವರು. ಮೈಸೂರಿನ

ಅರಮನೆ ಪಂಚಗವಿಮಠವು ಹೀಗೆ ಬಹುಶ್ರೇಷ್ಠ ಮಟ್ಟದ ಶಿವಯೋಗೀಶ್ವರರ ಪರಂಪರೆಯನ್ನು ಹೊಂದಿದ ಮಠ. ಈ ಮಠದ ಪರಂಪರೆಯ ಶಿವಯೋಗಿಗಳೆಲ್ಲ ಪ್ರಾಯಶಃ ನಿಜಗುಣರ ಷಟ್‌ಶಾಸ್ತ್ರ ಬಲ್ಲವರೆಂದೂ ಶಿವಯೋಗ ಮಾರ್ಗದಲ್ಲಿ ಅತ್ಯುಚ್ಚ ಮಟ್ಟದವರೆಂದೂ ತಿಳಿದುಬರುತ್ತದೆ.

***ಚರ ಜಂಗಮಾಧಿಕಾರ ಸ್ವೀಕಾರ***

೨೦ನೆಯ ಶತಮಾನದ ಎರಡನೆಯ ದಶಕದಲ್ಲಿ ಗವಿ ಮಠದ ಉತ್ತರಾಧಿಕಾರಕ್ಕೆ ಸುತ್ತೆತ್ತಲೂ ವಟುಗಳಿಗಾಗಿ ಭಕ್ತರಿಂದಲೂ ಅರಮನೆಯವರಿಂದಲೂ ಅನ್ವೇಷಣೆ ಪ್ರಾರಂಭವಾಯಿತು. ಯೋಗ್ಯ ಲಕ್ಷಣಗಳುಳ್ಳ ವಟುವು ಸಿಕ್ಕುವುದೇ ದುಸ್ತರವಾಯಿತು. ಗವಿಮಠ ಸಂಪತ್ತಿನ ಮಠವಾಗಿರಲಿಲ್ಲ. ಬೆಳ್ಳಿ-ಬಂಗಾರವಾಗಲಿ, ಭೂಮಿಕಾಣ ಯಾಗಲಿ ಏನೂ ಇಲ್ಲದೆ ಕೇವಲ ಅರಮನೆಯಿಂದಲೇ ಖರ್ಚುವೆಚ್ಚಗಳನ್ನು ತೂಗಿಸುವ ಮಠವಾಗಿದ್ದುದರಿಂದ ಬಹುಶಃ ಐಶ್ವರ್ಯದಾಸೆಯಿಂದ ಕೂಡಿದ ವ್ಯಕ್ತಿಗಳು ಅಲ್ಲಿ ಶ್ರೀಗಳಾಗಲು ಅಪೇಕ್ಷಿಸಲಿಲ್ಲವೋ ಏನೋ. ಅಂತೂ ಉತ್ತರಾಧಿಕಾರಿಗಳು ಯಾರೂ ಇಲ್ಲದಂತಾಗಿತ್ತು. ಮೈಸೂರಿನ ಭಕ್ತರ ಕಣ್ಣಿಗೆ ಆಗ ಬಿದ್ದವರು ಹನ್ನೆರಡು ವರ್ಷದ ತೇಜಸ್ವಿಯೂ, ಪ್ರತ್ಯುತ್ಪನ್ನಮತಿಯೂ, ಕನ್ನಡ-ಸಂಸ್ಕೃತ ಭಾಷಾಭ್ಯಾಸಿಯೂ ಲಿಂಗನಿಷ್ಠಾಗರಿಷ್ಠನೂ ಆದ ಉಕ್ಕಲಗೆರೆಯ ಶಂಕರನೊಬ್ಬನೇ. ಕೇವಲ ನಾಲ್ಕೇ ವರ್ಷಗಳಲ್ಲಿ ಶಂಕರ ತನ್ನ ಅನೇಕ ಗುಣಗಳಿಂದ ಮೈಸೂರಿನ ಹಿರಿಯರ ಗಮನ ಸೆಳೆದಿದ್ದನಲ್ಲದೆ, ವಿದ್ಯಾ ವಿನಯ ಸಂಪನ್ನತೆಯಿಂದ ಮೈಸೂರಿನ ವೀರಶೈವ ಸಮಾಜದ ಮನೆಮಾತಾಗಿದ್ದನು. ಆಗಿನ ಮೈಸೂರಿನ ದೊಡ್ಡ ವಿದ್ವಾಂಸರ ಬಾಯಲ್ಲಿ ಪ್ರತಿಭಾಶಾಲಿ, ಪ್ರತ್ಯುತ್ಪನ್ನಮತಿ ಉಜ್ವಲ ಭವಿಷ್ಯವಿರುವ ಬಾಲಕನೆಂಬ ಪ್ರಶಂಸೆಗೂ ಪಾತ್ರನಾಗಿಬಿಟ್ಟಿದ್ದ. ಹೀಗಾಗಿ ಬಾಲಕನಾದರೂ ಚಿಂತೆಯಿಲ್ಲ. ಭವ್ಯ ವಿದ್ವಾಂಸರ, ಶಿವಯೋಗನಿಷ್ಠಾಗರಿಷ್ಠರ ಪರಂಪರೆಯನ್ನು ಹೊಂದಿ ಸಾಗಿಬಂದಿರುವ ಈ ಗವಿಮಠಕ್ಕೆ ಶಂಕರನೆಂಬ ಹುಡುಗ ಉತ್ತರಾಧಿಕಾರಿಯಾಗಿದ್ದೇ ಈ ಸಮಾಜದ ಭಾಗ್ಯ.

*(- ಮುಂದುವರೆಯುತ್ತದೆ.)*

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಓದುಗರಾಗಿರುವುದು ಸಂತೋಷ. ಇದರಿಂದ 'ಸಿದ್ಧಗಂಗಾ' ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಪತ್ರಿಕೆ ಮುನ್ನಡೆ ಅಸಾಧ್ಯವಾಗಿದೆ. ಪೇಪರ್, ಪ್ರಿಂಟಿಂಗ್, ಪೋಸ್ಟೇಜ್ ಇನ್ನಿತರೆ ಖರ್ಚು ವೆಚ್ಚಗಳು ದುಬಾರಿಯಾಗಿದೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/-ರೂ ಆಜೀವ ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ. ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಪ್ರಸಾರ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಹಿಂಜರಿತ ದಯವಿಟ್ಟು ಅರ್ಥಮಾಡಿಕೊಳ್ಳಬೇಕೆಂದು ಕೋರುತ್ತೇವೆ.

**ಪ್ರಸ್ತುತ ಆಜೀವ ಚಂದಾ ೨೦೧೪ವರ್ಷದಿಂದ ೧೫೦೦/- ರೂ. ಎಂದು ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ. ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ. ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿ ರುವವರು ಬಾಕಿ ೫೦೦/- ಸಂದಾಯ ಮಾಡಬೇಕು.**

ನಿಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತ **ಸಿದ್ಧಗಂಗಾ ಮಾಸಪತ್ರಿಕೆ ಹೆಸರಿನಲ್ಲಿ ನಗದು /ಚೆಕ್ /ಡಿ.ಡಿ.** ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ LM ನಂಬರ್ ಸೂಚಿಸಿ ದೂರವಾಣಿ/ಮೊಬೈಲ್ ನಂಬರ್‌ನೊಂದಿಗೆ ಈ ವಿಳಾಸಕ್ಕೆ ಕಳುಹಿಸಬೇಕಾಗಿ ಕೋರುತ್ತೇವೆ.

**'ಸಿದ್ಧಗಂಗಾ'** ಮುನ್ನಡೆಗೆ ಬಾಕಿ ಸಂದಾಯ ಮಾಡಿ ಸಹಕರಿಸಬೇಕಾಗಿ ನಮ್ರ ವಿನಂತಿ.

**ಪ್ರಕಾಶಕರು, 'ಸಿದ್ಧಗಂಗಾ'** ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.
ದೂರವಾಣಿ : 0816-2282322





# ಮಡಿವಾಳಪ್ಪ ಮಲ್ಲೇಶಪ್ಪ ಕಲಬುರ್ಗಿ

- ಸಂಗ್ರಹ : ಟಿ.ಕೆ. ನಂಜುಂಡಪ್ಪ *

**ಪ್ರಜಾವಾಣಿ ೩೧-೦೮-೨೦೧೫**

ಸಂಶೋಧನೆ ಎನ್ನುವುದು ಸತ್ಯವನ್ನು ಶೋಧಿಸಲು ಮಾಡಿಕೊಂಡ ಪ್ರತಿಜ್ಞೆ ಎಂದು ನಂಬಿ ದಿಟದ ಹಾದಿಯಲ್ಲಿ ಸಾಗಿ ಬಂದವರು. ಪಾಂಡಿತ್ಯದೊಂದಿಗೆ ಪ್ರತಿಭೆಯೂ ಮೇಳೈಸಿದ ಅಪರೂಪದ ಸಾಹಿತು. ಸಂಶೋಧನೆಗೆ ಅರ್ಥವಂತಿಗೆಯೊಂದಿಗೆ ಹೊಸ ವಿನ್ಯಾಸವನ್ನು ರೂಪಿಸಿ ಆಕರ ಸಂಶೋಧನೆ, ವಿಶ್ಲೇಷಣಾತ್ಮಕ ಸಂಶೋಧನೆ ಮತ್ತು ವ್ಯಾಖ್ಯಾನಾತ್ಮಕ ಸಂಶೋಧನೆಯೆಂದು ವಿಂಗಡಿಸಿದ್ದು ಅವರ ಕೊಡುಗೆ.

ಅವರದು ಬಹುಮುಖ ಪ್ರತಿಭೆ. ಅವರ ಬರವಣಿಗೆಯ ಹಾಸು, ಹರಹು ದೊಡ್ಡದು. ಅವರ ಸಂಶೋಧನ ಕ್ಷೇತ್ರದ ಆಯಾಮದೊಳಗೆ ಗ್ರಂಥ ಸಂಪಾದನಾ ಶಾಸ್ತ್ರ, ಹಸ್ತಪ್ರತಿಶಾಸ್ತ್ರ, ಶಾಸನ, ನಿಘಂತು, ಛಂದಸ್ಸು, ವ್ಯಾಕರಣ, ಜಾನಪದ, ಚರಿತ್ರೆ, ನಾಮಶಾಸ್ತ್ರ, ಭಾಷಾಶಾಸ್ತ್ರ ಇನ್ನೂ ಮುಂತಾದುವು ಸೇರಿವೆ. ಮುಖ್ಯವಾಗಿ ಅವರು ದೇಶೀಯ ಚಿಂತನೆಗೆ ಒತ್ತು ಕೊಟ್ಟು ನೆಲದ ಮರೆಯ ನಿಧಾನವನ್ನು ಅರಸಿದವರು.

ಅವರ ತಲಸ್ಪರ್ಶಿ ಅಧ್ಯಯನ ಕನ್ನಡ ಸಾಹಿತ್ಯದ ಮೂಲಚೂಲಗಳನ್ನು ಅನ್ವೇಷಿಸಿ ಅನೇಕ ಹೊಸ ಶೋಧಗಳಿಗೆ ಹಾದಿ ನಿರ್ಮಿಸಿತು. ಅವರದು ಆತುರದ ನಡೆ. ಆದರಲ್ಲಿ ವೇಗವೂ ಬೆರೆತಿತ್ತು. ಮೈಸೂರು ಮಾದರಿ, ಧಾರವಾಡದ ಮಾದರಿ, ಮದರಾಸು ಮಾದರಿ ಎಂದು ಆಧುನಿಕ ಅಧ್ಯಯನ ವಿಧಾನದ ಕವಲುಗಳನ್ನು ಏಕ ಮಾದರಿಗೆ ತಂದು ಕೂಡಿಸುವ ಪ್ರಯತ್ನಗಳಲ್ಲಿ ಕಲಬುರ್ಗಿಯವರಿಗೆ ಸಿಂಹಪಾಲು. ಇದರಂತೆ ಪುಣೆಯ ಸಾಂಸ್ಕೃತಿಕ ಶೋಧ ಮತ್ತು ಮದರಾಸಿನ ಚಾರಿತ್ರಿಕ ಶೋಧ ಪರಿಕಲ್ಪನೆಯ ರೂಪುರೇಖೆಗಳನ್ನು ಅವರು ಬಿಡಿಸಿ ತೋರಿಸಿದರು.

ಶಾಸನಗಳೆಂದರೆ ಅವರಿಗೆ ಬಲು ಅಕ್ಕರೆ. ಅವರ ಕೃತಿರಾಶಿಯಲ್ಲಿ ಧಾರವಾಡ ಮತ್ತು ವಿಜಾಪುರ ಜಿಲ್ಲೆಯ ಶಾಸನ ಸೂಚಿ, ಶಾಸನ ಸಂಪದ, ಶಾಸನ ಸೂಕ್ತಿ ಸುಧಾರ್ಣವ, ಶಾಸನಗಳಲ್ಲಿ ಶಿವಶರಣರು, ಬಸವಣ್ಣ ನವರನ್ನು ಕುರಿತ ಶಾಸನಗಳು, ಮಹಾರಾಷ್ಟ್ರದ ಕನ್ನಡ ಶಾಸನಗಳು, ಶಾಸನ ವ್ಯಾಸಂಗ ೧, ೨ ಕೃತಿಗಳು ಮೌಲಿಕವಾಗಿವೆ. ಆಯಾ ಶಾಸನವನ್ನು ಬಿಡಿಸಿ ನೋಡುವಾಗ ಅದರ ತಿರುಳನ್ನು ಗುರುತಿಸುತ್ತಾರೆ. ಚಾರಿತ್ರಿಕ ಮಹತ್ವವನ್ನು ನಿರ್ದೇಶಿಸುತ್ತಾರೆ. 'ಇಂದಿನ ಕರ್ನಾಟಕಕ್ಕೆ ಭೂಗೋಳ ಸಣ್ಣದು, ಇತಿಹಾಸ ದೊಡ್ಡದು. ಇಂದಿನ ಮಹಾರಾಷ್ಟ್ರಕ್ಕೆ ಭೂಗೋಲ ದೊಡ್ಡದು, ಇತಿಹಾಸ ಸಣ್ಣದು', ಇಂಥ ಸೂತ್ರ ಪ್ರಾಯದ ಮಾತುಗಳು ಅವರ ಬರವಣಿಗೆಯಲ್ಲಿ ಹೇರಳ.

ಇನ್ನೊಂದು ಉದಾಹರಣೆ, 'ಉತ್ತರ ಕರ್ನಾಟಕದಲ್ಲಿ ಕುಟುಂಬ ಪ್ರಧಾನವಾಗಿದೆ. ದಕ್ಷಿಣ ಕರ್ನಾಟಕದಲ್ಲಿ ವ್ಯಕ್ತಿ ಪ್ರಧಾನವಾಗಿ, ಕುಟುಂಬ ಅಪ್ರಧಾನವಾಗಿದೆ. ಉತ್ತರ ಕರ್ನಾಟಕದವರು ಪ್ರಾಚೀನತಾ ಪ್ರಿಯರೂ ಜಾನಪದೀಯರೂ ಆಗಿದ್ದರೆ, ದಕ್ಷಿಣ ಕರ್ನಾಟಕದವರು ವರ್ತಮಾನ ನಿಷ್ಠರೂ ಶಿಷ್ಟಪದೀಯರೂ ಆಗಿದ್ದಾರೆ. 'ಕವಿರಾಜಮಾರ್ಗ ಪರಿಸರದ ಸಾಹಿತ್ಯ' ಒಂದು ಮೈಲಿಗಲ್ಲು. ಎಲ್ಲಕ್ಕೂ ಮಿಗಿಲಾಗಿ 'ಮಾರ್ಗ' ಸಂಪುಟಗಳು ಅವಿರತ ಶ್ರಮದ ಅಮೃತ ಫಲಗಳು. ಇವು 'ಪಂಪ ಪ್ರಶಸ್ತಿ'ಯನ್ನು ಮುಡಿಗೇರಿಸಿದ ಚಿನ್ನದ ಗಟ್ಟಿಗಳು. ಕನ್ನಡ ವಿಶ್ವವಿದ್ಯಾಲಯದ ಕುಲಪತಿ ಆಗಿದ್ದಾಗಲೂ ಮಾರ್ಗದಿಂದ ವಿಚಲಿತ ಆಗಿರಲಿಲ್ಲ.

ಎಂ.ಎಂ. ಕಲಬುರ್ಗಿಯವರು ಸ್ನೇಹಜೀವಿಯೂ ಹೌದು, ಸ್ವಾಭಿಮಾನಿಯೂ ಹೌದು. ಧಾರವಾಡದ ವಿದ್ಯಾ ವರ್ಧಕ ಸಂಘದ ಪದಾಧಿಕಾರಿ ಸ್ಥಾನಕ್ಕೆ ರಾಜೀನಾಮೆಯನ್ನಿತ್ತು ಹೊರಬಂದುದು ಅಂಥದೊಂದು ಸಂದರ್ಭ. ಕೆಲವು ವರ್ಷಗಳ ಕೆಳಗೆ ಶರಣ ಚೆನ್ನಬಸವಣ್ಣನವರ ವಿಚಾರದಲ್ಲಿ ಅವರು ನೀಡಿದ ಅಭಿಪ್ರಾಯ ಅಲ್ಲೋಲ ಕಲ್ಲೋಲಕ್ಕೆ ಎಡೆ ಮಾಡಿತು. ಮಠಾಧೀಶರೂ, ಉಗ್ರ ಶರಣಾಭಿಮಾನಿಗಳೂ

* ಕಾರ್ಯದರ್ಶಿಗಳು, ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆ (ರಿ.) ಶ್ರೀ ಸಿದ್ಧಗಂಗಾ ಮಠ.

ಬೀದಿಗಿಳಿದು ಪ್ರತಿಭಟಿಸಿದರು. ಈ ಧೀಮಂತ ವ್ಯಕ್ತಿ ಧೃತಿಗೆಡಲಿಲ್ಲ. ಕಲಬುರ್ಗಿಯವರಿಗೂ ಒಳಗೊಳಗೆ ಹಗೆಗಳ ವಿಚಾರದಲ್ಲಿ ಗುಮಾನಿಗಳಿದ್ದುವು. 'ಭಾರತದಂತಹ ಭಾವನಿಷ್ಠ ರಾಷ್ಟ್ರದಲ್ಲಿ ಸಂಶೋಧನೆ ಸರಳ ದಾರಿಯಲ್ಲ. ಕಹಿ ಸತ್ಯ ಹೇಳಬಾರದು ಎಂಬ ಸಂಪ್ರದಾಯದ ವಾರಸುದಾರರಾದ ಭಾರತೀಯರಿಗೆ ಅಂಥ ಸತ್ಯ ಸಹಜವಾಗಿಯೇ ಸಿಹಿ ಎನಿಸುವುದಿಲ್ಲ. ಈ ರಾಷ್ಟ್ರದಲ್ಲಿ ಸಂಶೋಧಕ ಆಗಾಗ ಸಣ್ಣಸಣ್ಣ ಶಿಲುಬೆಗಳನ್ನೇರಬೇಕಾಗುತ್ತದೆ. ಜಾಣರು ಮುಗ್ಧರನ್ನು ಬಳಸಿಕೊಂಡು ಸಂಶೋಧಕನನ್ನು, ಸತ್ಯವನ್ನು ಹಿಂಸಿರುವುದರಲ್ಲಿ ತೃಪ್ತಿ ಪಡುತ್ತಾರೆ. ಇಂಥ ಪ್ರಸಂಗಗಳಿಂದಾಗಿ ಭಾರತೀಯ ಸಂಶೋಧಕ ಅನೇಕ ಅಗ್ನಿ ಕುಂಡಗಳನ್ನು ದಾಟಬೇಕಾಗುತ್ತದೆ. ಕರ್ನಾಟಕದ ಬಗ್ಗೆ ಹೇಳುವುದಾದರೆ ಬಹುಶಃ ನನ್ನ ತಲೆಮಾರಿನ ಇತರ ಸಂಶೋಧಕರಿಗಿಂತ ಪರಿಸರವು ನನ್ನ ಕಾಲ ಕೆಳಗೆ ತೋಡಿದ ಅಗ್ನಿಕುಂಡಗಳೇ ದೊಡ್ಡವೆಂದು ತೋರುತ್ತದೆ. ಆದರೆ ಕಾಲ ಕೆಳಗಿನ ಬೆಂಕಿಗಿಂತ ಕಣ್ಣ ಮುಂದಿನ ಬೆಳಕು ದೊಡ್ಡದೆಂಬ ನನ್ನ ನಂಬಿಕೆ ನನ್ನನ್ನು ಈವರೆಗೆ ಉಳಿಸಿದೆ, ಬೆಳೆಸಿದೆಯೆಂದು ಭಾವಿಸಿದ್ದೇನೆ.

ಮೂಲಭೂತವಾದಿಗಳು ಗುಂಡಿಟ್ಟು ತೆಗೆದು ಕೊಂಡಿದ್ದು ಎಂ.ಎಂ. ಕಲಬುರ್ಗಿಯವರನ್ನು ಮಾತ್ರ ಅಲ್ಲ. ಸತ್ಯ ಹೇಳಲು ಹಿಂಜರಿಯದ ಸಾಹಿತ್ಯರತ್ನವನ್ನು, ಸಂಶೋಧಕ ಸಾಮ್ರಾಟನನ್ನು, ರಾಜಕಾರಣಿಗಳನ್ನು, ರಾಷ್ಟ್ರ ವರಿಷ್ಠರನ್ನು ಕೊಲ್ಲುವುದು ಹೊಸದಲ್ಲ. ಒಬ್ಬ ಅಮಾಯಕ ನಿರುಪದ್ರವಿ ಸಾಹಿತಿಯನ್ನು ಕೊಲೆ ಮಾಡಿರುವುದು ಅಪೂರ್ವ ಘಟನೆ. ಕಲಬುರ್ಗಿ ಬಹುಕಾಲ ನಿಲ್ಲುವ ಹೆಜ್ಜೆ ಗುರುತುಗಳನ್ನು ಬಿಟ್ಟು ಹೋಗಿದ್ದಾರೆ. ಅದನ್ನು ಯಾರೂ ಕೊಲ್ಲಲಾಗುವುದಿಲ್ಲ. ಅವರು ನಡೆದದ್ದು ಸತ್ಯಶೋಧನ ಪಥದಲ್ಲಿ, ಅವರು ತೋರಿದ್ದು ಸಂಶೋಧನೆಯ ಮಹಾ ಮಾರ್ಗ.

**– ಪ್ರೊ. ಹಂಪನಾ**

ಈ ಹತ್ಯೆ ಸಾಹಿತ್ಯ ಮತ್ತು ಸಾಂಸ್ಕೃತಿಕ ಸಂವೇದನೆಯ ಮೇಲೆ ನಡೆದ ದಾಳಿ.

**– ದೇವನೂರು ಮಹಾದೇವ**

ಸತ್ಯದೆಡೆಗೆ ಸಾಗುವ ಸಂಧೋಧಕನನ್ನು ರಾಷ್ಟ್ರ ಕಳೆದು ಕೊಂಡಿದೆ. ಕಲಬುರ್ಗಿ ದೇಹಕ್ಕಲ್ಲ ಸತ್ಯ ವೈಚಾರಿಕತೆಗೆ ಬಿದ್ದ ಗುಂಡು. ಕೊಲೆಪಾತಕಿಗಳು ತಾಲಿಬಾನಿಗಿಂತಲೂ ಹೇಡಿಗಳು.

**– ಪ್ರೊ. ಕೆ.ಎಸ್. ಭಗವಾನ್**

ಕಲಬುರ್ಗಿ ನನ್ನ ಕ್ಲಾಸ್‌ಮೇಟು, ಬ್ಯಾಚ್‌ಮೇಟು ಕೂಡ. ಹೌದು, ನನ್ನ ವಿಚಾರ ಅವನಿಗೆ, ಅವನ ವಿಚಾರ ನನಗೆ ಇಷ್ಟ ಆಗುತ್ತಿರಲಿಲ್ಲ. ಆದರೆ ಯಾರೇ ನಾಟಕಗಾರರ ಬಗ್ಗೆ ಕೇಳಿದರೆ ಕಲಬುರ್ಗಿ ನನ್ನ ಬಗ್ಗೆ ಹೇಳುತ್ತಿದ್ದ. ಅದೇ ರೀತಿ ಸಂಶೋಧನಕಾರರ ಬಗ್ಗೆ ನನಗೆ ಕೇಳಿದರೆ ನಾನು ಕಲಬುರ್ಗಿ ಹೆಸರು ಹೇಳುತ್ತಿದ್ದೆ. ಅಂತಹ ಒಳ್ಳೆಯ ಸ್ನೇಹಿತ ನಮ್ಮನ್ನು ಅಗಲಿರುವುದು ದುಃಖದ ಸಂಗತಿ.

**– ಚಂದ್ರಶೇಖರ ಕಂಬಾರ**

ವಿದ್ವತ್ತಿನ ಕಳಸ ಕಳಚಿದೆ, ಕಲಬುರ್ಗಿಯವರು ಅನಿಸಿದ್ದನ್ನು ನಿರ್ಭಯವಾಗಿ ಹೇಳುತ್ತಿದ್ದರು. ಅನೇಕ ವಿಚಾರಗಳಲ್ಲಿ ನನಗೂ, ಅವರಿಗೂ ಭಿನ್ನಾಭಿಪ್ರಾಯಗಳಿದ್ದವು. ಆದರೂ, ನಮ್ಮ ಸ್ನೇಹಕ್ಕೆ ಭಂಗ ಬಂದಿರಲಿಲ್ಲ. ಅವರ ಅಗಲಿಕೆಯಿಂದ ರಾಜ್ಯದಲ್ಲಿ ವಿದ್ವತ್ತಿನ ಕಳಸವೊಂದು ಕಳಚಿ ಬಿದ್ದಂತಾಗಿದೆ. ಅವರ ಸಾವು ನನಗೆ ಅಪಾರ ನೋವುಂಟು ಮಾಡಿದೆ.

**– ಎಂ. ಚಿದಾನಂದಮೂರ್ತಿ**, ಹಿರಿಯ ಸಂಶೋಧಕ

ಅನೇಕ ವಿಷಯಗಳಲ್ಲಿ ನನ್ನ ಹಾಗೂ ಕಲಬುರ್ಗಿ ಅವರ ಮಧ್ಯೆ ಭಿನ್ನಾಭಿಪ್ರಾಯಗಳಿದ್ದವು. ಆದರೆ ಅವರು ಪ್ರತಿಯೊಂದರ ಬಗ್ಗೆ ಮುಕ್ತ ಮನಸ್ಸಿನಿಂದ ಚರ್ಚಿಸುತ್ತಿದ್ದರು. ಪ್ರಜಾತಾಂತ್ರಿಕ ಮನಸ್ಸಿನ ವ್ಯಕ್ತಿಯಾಗಿದ್ದರು. ಅವರು ನನಗೆ ಹಿರಿಯಣ್ಣನಂತಿದ್ದರು. ಸಿಕ್ಕಾಗಲೆಲ್ಲ 'ಹೊರಗಣವನು' ಎಂದು ವ್ಯಂಗ್ಯವಾಗಿ ಕರೆಯುತ್ತಿದ್ದರು. ಅವರನ್ನು ಕೊಂದಿದ್ದು ನೀಚಕೃತ್ಯ.

**– ಬಂಜಗೆರೆ ಪ್ರಕಾಶ್, ಅಧ್ಯಕ್ಷ, ಕನ್ನಡ ಪುಸ್ತಕ ಪ್ರಾಧಿಕಾರ**

ಇಂದು ಬೆಳಿಗ್ಗೆ ೮.೩೩ಕ್ಕೆ ಕಲಬುರ್ಗಿ ಅವರು ನನಗೆ ಕರೆ ಮಾಡಿ ಅಕಾಡೆಮಿ ವಿಷಯವಾಗಿ ಮಾತನಾಡಿದ್ದರು. ಆದರೆ ೮.೪೫ಕ್ಕೆ ಅವರ ಹತ್ಯೆ ನಡೆದ ಸುದ್ದಿ ಬಂತು. ತನ್ನ ಅಭಿಪ್ರಾಯ ಹೇಳಿದವರಿಗೆ ಗುಂಡಿನ ಮೂಲಕ ಉತ್ತರ ಎಂದರೆ ನಾವು ಯಾವ ಸಮಾಜದಲ್ಲಿ ಇದ್ದೇವೆ. ಇದು ಪ್ರಜಾಪ್ರಭುತ್ವದ ಕೊಲೆ.

**– ನರಹಳ್ಳಿ ಬಾಲಸುಬ್ರಹ್ಮಣ್ಯ**, ವಿಮರ್ಶಕರು

ಕಲಬುರ್ಗಿ ಅವರು ತಮ್ಮ ವೈಚಾರಿಕ ನಿಲುವುಗಳಿಗೆ ಸದಾ ಬದ್ಧರಾಗಿ ಇರುತ್ತಿದ್ದರು. ಯಾರ ವಿರೋಧವನ್ನು ಲೆಕ್ಕಿಸದೇ ತಮಗೆ ಸರಿ ಎನಿಸಿದ್ದನ್ನು ಹೇಳುತ್ತಿದ್ದರು.

**– ಸಿ.ಎನ್. ರಾಮಚಂದ್ರನ್**, ವಿಮರ್ಶಕರು





ಕಲಬುರ್ಗಿ ಅವರದ್ದು ನನ್ನದು ಅಣ್ಣ–ತಂಗಿಯ ಸಂಬಂಧ. ನಾವಿಬ್ಬರೂ ಏಕವಚನದಲ್ಲೇ ಮಾತನಾಡುತ್ತಿದ್ದೆವು. ಅವರು ಕಟುವಾಗಿ, ನಿಷ್ಠುರವಾಗಿ ಸತ್ಯವನ್ನು ಹೇಳುತ್ತಿದ್ದರು ಖರೆ. ಆದರೆ, ಮನಸ್ಸು ಮೃದು, ಯಾರನ್ನಾದರೂ ಒಮ್ಮೆ ಹಚ್ಚಿಕೊಂಡರೆ ಅವರೊಂದಿಗೆ ಆತ್ಮೀಯರಾಗಿ ಬಿಡುವ ಹೃದಯವಂತಿಕೆ ಅವರದ್ದು. ನನ್ನ ಪ್ರೀತಿಯ ಅಣ್ಣನವರನ್ನು ಕಳೆದುಕೊಂಡು ಕಂಗಾಲಾಗಿದ್ದೇವೆ.

**– ಡಾ. ಗೀತಾ ನಾಗಭೂಷಣ**

ಡಾ.ಎಂ.ಎಂ. ಕಲಬುರ್ಗಿ ಅವರ ಜತೆಗಿನ ನನ್ನ ಒಡನಾಟ ೪೦ ವರ್ಷಗಳಷ್ಟು ಹಳೆಯದು. ಕಳೆದ ವರ್ಷ ಮಂಗಳೂರಿನಲ್ಲಿ ಕಮ್ಮಟ ನಡೆಸಿ ತುಳು ಭಾಷೆಗೆ ವಚನಗಳನ್ನು ತರುವ ಕಾಯಕಕ್ಕೆ ಚಾಲನೆ ನೀಡಿದರು. ಇದರಿಂದ ತುಳು ಭಾಷೆಯ ಶ್ರೀಮಂತಿಕೆಯನ್ನು ಅವರು ಹೆಚ್ಚಿಸಿದರು. ಅವರು ಒಬ್ಬ ಅಸಾಮಾನ್ಯ ಸಂಘಟಕ. ಸಂಸ್ಥೆಗಳನ್ನು ಕಟ್ಟುವುದನ್ನು ಅವರಿಂದ ಕಲಿಯಬೇಕು. ನಾನು ಹಂಪಿ ಕನ್ನಡ ವಿವಿ ಕುಲಪತಿಯಾಗಿದ್ದಾಗ ವಿಜಯಪುರದ ಫ.ಗು. ಹಳಕಟ್ಟಿಯವರ ಹೆಸರಿನ ಸಂಸ್ಥೆಗೆ ಸಂಶೋಧನಾ ಮಾನ್ಯತೆ ದೊರಕಿಸಿಕೊಡುವಂತೆ ನನ್ನಲ್ಲಿ ಕೇಳಿಕೊಂಡಾಗಲೇ ಅವರ ದೂರದೃಷ್ಟಿಯ ಅರಿವಾಗಿತ್ತು. ಅವರಿಂದ ಅಂತಹ ಅದೆಷ್ಟೋ ಸಂಸ್ಥೆಗಳು ಬೆಳೆದಿವೆ.

**– ಬಿ.ಎ. ವಿವೇಕ ರೈ, ವಿಶ್ರಾಂತ ಕುಲಪತಿ**

ನನ್ನ ಅವರ ಒಡನಾಟವು ಅವರು ಕನ್ನಡ ವಿಶ್ವ ವಿದ್ಯಾಲಯಕ್ಕೆ ಕುಲಪತಿಗಳಾಗಿ ಬಂದ ಬಳಿಕ ಒದಗಿತು. ಎರಡನೆಯ ಕುಲಪತಿಗಳಾಗಿ ಕಾಲಿಡುವಾಗಲೇ ಕೆಲವು ಆಗ್ರಹಗಳನ್ನು ಇಟ್ಟುಕೊಂಡಿದ್ದರು.

ಸಾರ್ವಜನಿಕ ಹಣದಲ್ಲಿ ನಡೆಯುವ ಕರ್ನಾಟಕದ ವಿಶ್ವವಿದ್ಯಾಲಯಗಳಲ್ಲಿ ಶೈಕ್ಷಣಿಕ ಅರ್ಹತೆ ಮತ್ತು ಆಸಕ್ತಿ ಇಲ್ಲದವರೇ ಸೇರಿಕೊಂಡಿದ್ದಾರೆಂದೂ, ಅವು ಚಲಿಸಲಾಗದ ಹಂಪಿಯ ಕಲ್ಲಿನ ರಥಗಳಾಗಿವೆಯೆಂದೂ ಅವನ್ನು ಚಲನಶೀಲಗೊಳಿಸಬೇಕೆಂಬುದು ಒಂದು; ಎರಡನೆಯದು, ಕನ್ನಡ ವಿಶ್ವವಿದ್ಯಾಲಯದಲ್ಲಿ ಹಳಗನ್ನಡ, ಶಾಸ್ತ್ರ ಸಾಹಿತ್ಯ ಪರಿಚಯವಿಲ್ಲದ, ಪಂಪನನ್ನು ಓದಲು ಬಾರದ, ಆಧುನಿಕ ಸಾಹಿತ್ಯದಲ್ಲಿ ಮಾತ್ರ ಆಸಕ್ತಿಯಿರುವ ವಿಚಾರವಾದಿಗಳೇ ತುಂಬಿಕೊಂಡಿದ್ದಾರೆಂದೂ, ಅವರಿಗೆಲ್ಲ ಪ್ರಾಚೀನ ಸಾಹಿತ್ಯ, ಶಾಸನ ಸಾಹಿತ್ಯಗಳ ದೀಕ್ಷೆ ಕೊಟ್ಟು ಕೆಲಸ ಮಾಡಿಸಬೇಕೆಂಬುದು. ನಮಗೋ ವೈಚಾರಿಕವಾಗಿ ಸಮಸ್ಯೆಗಳಿರುವ ಅವರ ಸಂಶೋಧನ ನಿಲುವಿನ ಜತೆ ಮುಖಾಮುಖಿ ಮಾಡಿ, ಸಾಧ್ಯವಾದರೆ ಅವರನ್ನೇ ಬದಲಿಸಬೇಕೆಂಬ ಛಲ. ಈ ನಿಲುವಿನ ಸಂಘರ್ಷ ಅವರು ನಮ್ಮನ್ನು ಉದ್ದೇಶಿಸಿ ಮಾಡಿದ ಪ್ರಥಮ ಉಪನ್ಯಾಸದಲ್ಲಿಯೇ ಪ್ರಕಟವಾಯಿತು.

ಆದರೆ ಮೂರು ವರ್ಷಗಳ ಇಂತಹುದೇ ಮುಖಾಮುಖಿಯಲ್ಲಿ, ನಮಗರಿಯದಂತೆಯೇ ಅವರೂ ಅವರಿಗರಿಯದಂತೆ ನಾವೂ ಪರಸ್ಪರ ಬದಲಾದೆವು ಮತ್ತು ಕಲಿತೆವು. ದೇಶೀ ಪ್ರತಿಭೆಯ ಸೃಜನಶೀಲ ಮನಸ್ಸಿನ ಕವಿ ಚಂದ್ರಶೇಖರ ಕಂಬಾರರು ಕನ್ನಡ ವಿಶ್ವವಿದ್ಯಾಲಯಕ್ಕೆ ಬುನಾದಿ ಹಾಕಿದರು; ಕ್ಲಾಸಿಕಲ್ ಅಭಿರುಚಿ ಮತ್ತು ಮಾರ್ಗ ಮನೋಧರ್ಮದ ಕಲಬುರ್ಗಿಯವರು ಅದರ ಮೇಲೊಂದು ಭದ್ರವಾದ ಇಮಾರತನ್ನು ಕಟ್ಟಿದರು. ಅವರ ಮತ್ತು ನಮ್ಮ ವಿದ್ವತ್ ನಂಟು ಅವರು ನಿವೃತ್ತರಾಗಿ ಧಾರವಾಡಕ್ಕೆ ತೆರಳಿದ ಬಳಿಕವೂ ಮುಂದುವರೆದಿದ್ದು ಇದಕ್ಕಾಗಿ ಅವರನ್ನು ತಮಾಷೆಯಾಗಿ ಅನಧಿಕೃತ ಕುಲಪತಿ ಎಂದು ಕರೆಯುತ್ತಿದ್ದೆವು.

ಕರ್ನಾಟಕದ ಅದ್ಯಂತ ಯಾವುದಾವುದೋ ಕಾಲೇಜುಗಳಲ್ಲಿ ಅಧ್ಯಾಪಕರಾಗಿರುವ ಸಂಶೋಧನ ಸಾಮರ್ಥ್ಯ ಇರುವವರನ್ನು ಗುರುತಿಸಿ, ಅವರಿಂದ ಕರ್ನಾಟಕದ ಅಧ್ಯಯನಗಳಿಗೆ ಯಾವ ವಿಷಯದ ಮೇಲೆ ಕೆಲಸ ಮಾಡಿಸಬಹುದು ಎಂದು ಚಿಂತಿಸಿ, ಯೋಜನೆ ರೂಪಿಸಿ ಕೊಡುವ ಕೆಲಸವನ್ನು ಕಡೆತ ತನಕವೂ ಮಾಡುತ್ತಿದ್ದರು.

ಅವರಿಗೆ ಕನ್ನಡದ ಕೆಲಸ ಮಾಡಲು ವಿಶ್ವವಿದ್ಯಾಲಯಗಳೇ ಬೇಕಿರಲಿಲ್ಲ. ಅವರಂತೆ ಕರ್ನಾಟಕಕ್ಕೆ ಉಪಯುಕ್ತ ಸಾಂಸ್ಥಿಕ ಯೋಜನೆಗಳನ್ನು ಕೈಗೆತ್ತಿಕೊಂಡು ಪೂರೈಸಿದ ವಿದ್ವಾಂಸರೇ ಇಲ್ಲ.

**– ರಹಮತ್ ತರೀಕೆರೆ**

ಧಾರವಾಡ ವಿಶ್ವವಿದ್ಯಾಲಯದಲ್ಲಿ ಸ್ನಾತಕೋತ್ತರ ಪದವಿಯಿಂದ ಹಿಡಿದು ಈ ತನಕ ೫೫ ವರ್ಷಗಳ ಕಾಲ ನಾವು 'ಏಕವಚನದ ಒಡನಾಡಿ'ಗಳು. ಗೋಕಾಕ ಚಳುವಳಿಯಲ್ಲಿ ಸಕ್ರಿಯವಾಗಿ 'ರಿಮೋಟ್ ಕಂಟ್ರೋಲ್'ನಂತೆ ಪಾಲ್ಗೊಂಡಿದ್ದೆವು. ನಾನು, ಕಲಬುರ್ಗಿ, ಕಂಬಾರ, ಗಿರಡ್ಡಿ

ಒಂದೇ ತಂಡದಲ್ಲಿದ್ದೆವು. ನಮ್ಮ ನಡುವೆ ಪ್ರೀತಿ ಇತ್ತು. ಪ್ರೀತಿ ಕಳೆದುಕೊಂಡರೆ, ಜಗಳಾಡಲೂ ಸಾಧ್ಯವಿಲ್ಲ ಎಂಬ ಅರಿವಿತ್ತು.

ಫ.ಗು. ಹಳಕಟ್ಟಿ ಅವರ ಬಳಿಕ ಸಾಹಿತ್ಯದಲ್ಲಿ ವ್ಯಾಪಕ ರೀತಿಯಲ್ಲಿ ಕೆಲಸ ಮಾಡಿದ ವ್ಯಕ್ತಿತ್ವ 'ಕಲಬುರ್ಗಿ' ಎಂದರೆ ತಪ್ಪಲ್ಲ. ಕಾಯಕ, ಪರಿಪೂರ್ಣತೆ, ಹಟ, ಸರಳತೆ, ಬದ್ಧತೆ, ನಿರ್ಭೀಡೆಯ ಸ್ವಭಾವ, ಹಿಡಿದ ಕೆಲಸದಲ್ಲಿ ಸಂಪೂರ್ಣ ತೊಡಗಿಸಿಕೊಳ್ಳುವ ಮನಃಸ್ಥಿತಿ. ಇಂದು ಅಪರೂಪ ಆಗುತ್ತಿರುವ 'ಪಾಂಡಿತ್ಯ, ಬದ್ಧತೆ ಮತ್ತು ಸರಳತೆ'ಯ ಪ್ರತಿರೂಪವಾಗಿದ್ದರು.

ಆದರೆ, ಕಲಬುರ್ಗಿ ಪ್ರತಿಕ್ರಿಯೆ ಮಾಡುವ ಶೈಲಿಯಲ್ಲಿ ಸ್ವಲ್ಪ ದುಡುಕಿನ ಸ್ವಭಾವ ಇತ್ತು. ಅಂತಹ ಹೇಳಿಕೆಗಳಿಂದ ಕೆಲವು ವರ್ಗಗಳ ಅಪನಂಬಿಕೆಗೆ ಪಾತ್ರರಾಗಿದ್ದರು. ಅದೇ ಅಸಮಧಾನಕ್ಕೂ ಕಾರಣವಾಗಿತ್ತು. ಅವರ 'ಮಾರ್ಗ' ಮತ್ತು 'ಅನಂತಮೂರ್ತಿ ವಿಚಾರಗಳ' ಕುರಿತ ಹೇಳಿಕೆ ಸಂದರ್ಭದಲ್ಲೂ ವಿರೋಧ ವ್ಯಕ್ತವಾಗಿದ್ದವು. ಸಮೂಹ ಮಾಧ್ಯಮಗಳಿಂದಲೂ ಮಾನಸಿಕ ತೊಂದರೆಗೆ ಒಳಗಾಗಿದ್ದರು. ಆದರೆ ಈ ರೀತಿಯ ಅತಿರೇಕತನ ಮಾತ್ರ ಅನಿರೀಕ್ಷಿತ.

**– ಡಾ. ಚಂದ್ರಶೇಖರ ಪಾಟೀಲ**

**ಪ್ರಜಾಪ್ರಗತಿ – ೩೧-೦೮-೨೦೧೫**

ಕಲಬುರ್ಗಿ ಕರ್ನಾಟಕ ಕಂಡ ಅತ್ಯಂತ ದೊಡ್ಡ ಸಂಶೋಧಕರು. ವಿಶೇಷವಾಗಿ ಕರ್ನಾಟಕದ ಸಂಸ್ಕೃತಿ ಯನ್ನು ಸಂಯೋಜಿಸುವ ಸಂಶೋಧನೆ ಮಾಡಿದವರು.

**– ಬರಗೂರು ರಾಮಚಂದ್ರಪ್ಪ**

ಅವರು ನಿಷ್ಠಾವಾದ ನಾಡೋಜರಾಗಿದ್ದರು. ಇವರಿಂದ ತರಗತಿಗಳಲ್ಲಿ ಕಲಿತ ವಿದ್ಯಾರ್ಥಿಗಳಿಗಿಂತ ತರಗತಿಯ ಹೊರಗೆ ಕಲಿತ ವಿದ್ಯಾರ್ಥಿಗಳ ಸಂಖ್ಯೆ ಅಪಾರವಾದುದು. ಸಂಶೋಧನೆ ಹೇಗಿರಬೇಕೆಂಬುದನ್ನು ಒಂದು ಮಾದರಿಯಾಗಿಸಿದ ವಿದ್ವಾಂಸರು.

**– ಪ್ರೊ. ಎಸ್.ಜಿ. ಸಿದ್ಧರಾಮಯ್ಯ**

ಸಾಹಿತ್ಯ, ವಿಜ್ಞಾನ ಮತ್ತು ಸಂಶೋಧನೆಯ ಮೂಲಕ ಈ ನಾಡಿನ ಬಹುದೊಡ್ಡ ಸಂಶೋಧಕರಾಗಿದ್ದರು. ಕುಲಪತಿಗಳಾಗಿ ಇವರ ವೈಚಾರಿಕ ಚಿಂತನೆ ಅತ್ಯಂತ ಮೌಲಿಕವಾದುದು. ನೇರ ನಡೆ ಮತ್ತು ಸತ್ಯನಿಷ್ಠುರವಾದಿಗಳಾಗಿದ್ದುದರಿಂದ ಬಸವಣ್ಣನವರ ತತ್ತ್ವಕ್ಕೆ ಹತ್ತಿರವಾಗಿದ್ದರು.

**– ಡಾ. ಸಿ. ಸೋಮಶೇಖರ್**

ಈ ಘಟನೆಯಿಂದಾಗಿ ಸಾರಸ್ವತ ವೈಚಾರಿಕಲೋಕಕ್ಕೆ ದೊಡ್ಡ ಅವಮಾನವಾಗಿದೆ. ಧಾರವಾಡ ಸಂಸ್ಕೃತಿಗೆ ಕಳಂಕವಾಗಿದೆ. ಇಂತಹ ಘಟನೆಗಳು ಎಂದಿಗೂ ಆಗಬಾರದು.

**– ಡಾ. ಚಂದ್ರಶೇಖರ ಪಾಟೀಲ**

ಖ್ಯಾತ ವಿದ್ವಾಂಸರು, ನನ್ನಂತಹ ಅನೇಕರಿಗೆ ಪ್ರೇರಕರು, ಮಾರ್ಗದರ್ಶಕರಾಗಿದ್ದರು. ಕಲಬುರ್ಗಿಯವರು ಪ್ರತ್ಯಕ್ಷವಾಗಿ ಬರವಣಿಗೆ ಮೂಲಕ ಮಾತ್ರವಲ್ಲದೆ, ಅನೇಕ ಸಂಶೋಧಕರನ್ನು, ಪ್ರಕಾಶಕರನ್ನು ಸಿದ್ಧಗೊಳಿಸಿದರು. ಇವರ ಹತ್ಯೆಯಿಂದ ನಾಡಿನ ಸಂಸ್ಕೃತಿಯ ಪ್ರಮುಖ ಭಾಗವನ್ನೇ ನಾಶಗೊಳಿಸಿದಂತಾಗಿದೆ.

**– ಡಾ. ಪದ್ಮಪ್ರಸಾದ್**

ಕರ್ನಾಟಕ ಕಂಡ ಸತ್ಯನಿಷ್ಠ ಸಂಶೋಧಕರಾಗಿದ್ದರು. ಸತ್ಯಕ್ಕೆ ಬದ್ಧರಾಗಿದ್ದರು.

**– ನಟರಾಜು ಹುಳಿಯಾರು**

ಸಂಶೋಧನೆಗೆ ಒಂದು ಹೊಸ ಚಿಂತನಾಕ್ರಮವನ್ನು ರೂಪಿಸಿ ನನ್ನಂಥ ಸಾವಿರಾರು ಸಂಶೋಧಕರಿಗೆ ಮಾರ್ಗದರ್ಶಕರಾಗಿ ನಿಂತು ನಮ್ಮನ್ನು ಬೆಳೆಸಿದ ಎಂ.ಎಂ. ಕಲಬುರ್ಗಿಯವರ ಸಾವು ಇಡೀ ಕನ್ನಡ ಸಂಶೋಧನಾ ಕ್ಷೇತ್ರವನ್ನೇ ದುಃಖದಲ್ಲಿ ಮುಳುಗಿಸಿದೆ.

**– ಡಾ. ಡಿ.ಎನ್. ಯೋಗೀಶ್ವರಪ್ಪ**

## The Hindu 31-08-2015 Monday

**M.M. Kalburgi shot at his residence :**

In a shocking incident, M.M. Kalburgi (77)-veteran Kannada writer and former Vice-Chancellor of Kannada University, Hampi-who was known for his strong stand against superstitious practices and rightwing groups, was shot dead by two unidentified persons at his house in Kalyan Nagara here at 8.40 a.m. on sunday.





According to his family members, Prof. Kalburgi was speaking in his cellphone when someone knocked on the door of his house. When he opened the door, Prof. Kalburgi was shot at point blank range on his forehead. The bullet pierce through his head. His daughter Roopadarshi, said that after hearing the gunshots, they rushed to the varandah and saw Prof. Kalburgi lying on the ground.

He was rushed to a private hospital and from there to the District Civil hospital, where he was declared brought dead.

Along with Mr. Roopadarshi, Prof. Kalburgi's wife, Umadevi, and grandson were in the house wen the incindent occured. There was no clue about the assilants as there are eyewitnesses.

**Reminiscences :**

We were classmates; we sat on the same bench. I am really shocked.

**– Chandrashekar Kambar,** Jnanapith Award winning writer.

The murder is nothing but an attempt to silence democratic opinions.

**– Narahalli Balasubramanya,** Writer

'He was at the centre of controveries' M.M. Kalburgi was an edurite scholar and an authority on the Vachana literature. At the same time, he was often in the news for his rational research findings, which lead to controveries and conflicts, witht the right wing group taking exception to his views.

Though Prof. Kalburgi was an expert in reals like ancient scripture, Halegannada, grammar, literature, culture and folk arts among others, his stubborn nature landed him in controversies. Some of his observations did not go down well with certain occasions when community members and others protested against him.

**– N. Dinesh Nayak,** Dharwar

As the second Vice-chancellor, Prof. Kalburgi gave the Kannada University a strong intellectual base through several rare research projects and publications.

**– A.V. Navada**

Former director, Prasaranga Kannada University

Kalburgi was a modern scholar who bridged the gap between oriental and modern scholarship. He argued in favour of Dravidian knowledge system. He was a round the clock research scholar.

**– H.S. Raghavendra Rao,** Professor

**ಸಿದ್ಧಗಂಗಾ ಮಾಸಪತ್ರಿಕೆ**
**ಚಂದಾದಾರರ ಗಮನಕ್ಕೆ**

ಚಂದಾದಾರರ ಸರಿಯಾದ ವಿಳಾಸವಿಲ್ಲದೆ ಪತ್ರಿಕೆಗಳು ನಮ್ಮ ಕಾರ್ಯಾಲಯಕ್ಕೆ ಹಿಂದಕ್ಕೆ ಬರುತ್ತಿವೆ. ತಾವು ದಯವಿಟ್ಟು ವಿಳಾಸ ಬದಲಾವಣೆಯಾದಲ್ಲಿ ಚಂದಾದಾರರ ಸಂಖ್ಯೆ ಹಾಗೂ ಅಂಚೆ ಪಿನ್‌ಕೋಡ್ ಇರುವ ಸರಿಯಾದ ವಿಳಾಸದ ಜೊತೆಗೆ ಮೊಬೈಲ್ ಫೋನ್‌ಸಂಖ್ಯೆ ಸಹ ಪತ್ರಿಕೆ ಕಾರ್ಯಾಲಯಕ್ಕೆ ತಿಳಿಸಲು ಕೋರಲಾಗಿದೆ.

–ಪ್ರಕಾಶಕರು

# ಶಾಕ್ತ ಸಂಪ್ರದಾಯ ಮತ್ತು ಅಲ್ಲಮಪ್ರಭು

– ಪ್ರೊ. ಕೆ.ಜಿ. ನಾಗರಾಜಪ್ಪ *

ಅಲ್ಲಮನ ವಚನಗಳಲ್ಲಿ ಸೂತ್ರದಂತೆ ವಚನಗಳೇ ಅಧಿಕ. ಅದೂ ಅಲ್ಲದೆ ವಿರುದ್ಧದ ಹೇಳಿಕೆಯ ವಚನಗಳೇನೂ ಸಂಖ್ಯೆಯಲ್ಲಿ ಕಡಿಮೆ ಇಲ್ಲ. ಇದುವರೆವಿಗೂ ಅವನ ವಚನಗಳಿಗೆ ಸೂಕ್ತವಾದ ಅನುಭವ ಮತ್ತು ಅನುಭಾವದ ವ್ಯಾಖ್ಯಾನ ಹೊರಬಿದ್ದಿಲ್ಲ. ಅವನ ವಚನಗಳಿಗೆ ಅರ್ಥ ಕಂಡುಕೊಳ್ಳುವ ಕೆಲವು ಕೀಲಿಕೈ ಉಡುಕಿಕೊಂಡರೆ ಅಲ್ಲಮನ ಅಧ್ಯಯನ ಕಷ್ಟವಾಗುವು ದಿಲ್ಲ. ಆದರೆ ಅವನ ತತ್ವ ಚಿಂತನೆಗೆ ಕಾವ್ಯಚಿಂತನೆಗೆ ಅಡ್ಡ ಬರಬಾರದು. ಅಲ್ಲಮನ ಬೆಡಗಿನ ವಚನಗಳು ಅರ್ಥವಾಗುವುದಿಲ್ಲ ಎಂಬುದು ಸಾಮಾನ್ಯ ಅಭಿಪ್ರಾಯ. ನನಗೆ ಹಾಗೆನ್ನಿಸುವುದಿಲ್ಲ. ನಮ್ಮ ಸುತ್ತಮುತ್ತಲ ದೈನಂದಿನ ಜೀವನದಲ್ಲಿಯೇ ಬೆಡಗಿನ ಮಾತುಗಳು ರೂಢಿಯಲ್ಲಿವೆ. ಅಲ್ಲಮ ನಮಗೆ ಪ್ರವೇಶವೇ ಆಗೋದಿಲ್ಲವೇ? ಅಕಾಡೆಮಿಕ್ ವಲಯದಲ್ಲಿ ಅಮೂರ್ತ ಚಿಂತನಗಳೇ, ಬೌದ್ಧಿಕ ಸರ್ಕಸ್ಸೇ ನಮ್ಮ ಕಾಂಟ್ರಿಬ್ಯೂಷನ್ ಅಂತ ತಿಳಿ ಕೊಂಡಿದ್ದೇವೆ. ಶ್ರೀಸಾಮಾನ್ಯನಲ್ಲಿಯೂ ಅಮೂರ್ತ ಚಿಂತನೆಗಳಿವೆ.

ಬೆಳಿಗ್ಗೆ ಇಬ್ಬರೂ ದಾರಿಯಲ್ಲಿ ಹೋಗುವಾಗ ಸಂಧಿಸುತ್ತಾರೆ. ಒಬ್ಬ, 'ಏನಪ್ಪಾ, ಎಲ್ಲಿಗೆ ಹೊರಟೆ? ಇದೇನು ಇಷ್ಟೊತ್ತ್ಗೇ ಕಣ್ಣು ಧರಿಸಿಕೊಂಡು ಬಂದ್ಬಿಟ್ಟೆಲ್ಲಾ' ಎಂದು ಪ್ರಶ್ನಿಸುತ್ತಾರೆ. 'ಏ.....ಏ.....' ಅಂತ ತಲೆ ಕೆರೆದು ಕೊಂಡೂ ನಿಲ್ಲದೇ ಹೋಗುತ್ತಾನೆ. ಈ ಸಂಭಾಷಣೆಯನ್ನು ನೋಡಿ, ಭಾಷೆ ನೋಡಿ ಎಷ್ಟು ಸರಳವಾಗಿದೆ, ಎಷ್ಟು ಸಹಜವಾಗಿದೆ. ಇದರ ಅರ್ಥ ಏನು? ಕಣ್ಣು ಧರಿಸೋಕಾಗುತ್ತಾ? ಗ್ರಾಮದೇವತೆ ಹಬ್ಬದಲ್ಲಿ, ಮಣ್ಣಿನಿಂದ ಮಾಡಿದ ದೇವತೆಯ ವಿಗ್ರಹಕ್ಕೆ ಅಂತಿಮವಾಗಿ ಕಣ್ಣು ಧರಿಸುತ್ತಾರೆ. ಯಾತ್ರೂ ಕಣ್ಣು ಧರಿಸುವುದನ್ನು ನೋಡಬಾರದು, ಕೆಟ್ಟದಾಗುತ್ತದೆ, ಧರಿಸುವಾಗ ಬಲಿ ಕೊಡುತ್ತಾರೆ. ಕಣ್ಣು ಧರಿಸುವುದು, ಧಾರ್ಮಿಕ ವಿಧಿಯ ಸಂದರ್ಭದ ಬಳಕೆಯ ಪದ. ಆದರೆ ನಿತ್ಯ ಬಳಕೆಯ ಪದವಾಗಿದೆ. ಇಲ್ಲಿ ಕಣ್ಣು ಧರಿಸುವುದು ಹೆಂಡ ಕುಡಿದು ಕಣ್ಣು ಕೆಂಪಾಗಿವೆ. ಅದನ್ನೇ ಮೊಗುಂ ಆಗಿ ಕಣ್ಣು ಧರಿಸಿದ್ದೀಯ ಎಂದು ಕೇಳುತ್ತಾನೆ. ಕುಡಿದಾಗ ಕುಡುಕರ ದೃಷ್ಟಿಯೇ ಬದಲಾಗುತ್ತದೆ. ನಗರದಲ್ಲಿ ನೆಲೆಸಿದವ ಹಳ್ಳಿಗೆ ಹೋಗಿ ಬಂದಾಗ, ಸ್ನೇಹಿತ 'ಏನಪ್ಪಾ.... ಗದ್ದೆಗೆ ನೀರು ಬಿಟ್ಬಿಟ್ಟೋ? ವ್ಯವಸಾಯ ಮಾಡಿ ಬಂದ್ಬಿಟ್ಟೋ?' ಎನ್ನುತ್ತಾನೆ. ನಗರದವನೇ ಆದರೆ, 'ಏನಮ್ಮಾ... ಮಿಷನ್ ಬಿಟ್ಟು ಬಂದ್ಬಿಟ್ಟಾ..?' ಎನ್ನುತ್ತಾನೆ. ಇಲ್ಲಿನ ಮಾತಿನ ಸಂದರ್ಭಗಳನ್ನು ನೋಡಿ. ನಾವು ಅಕಾಡೆಮಿಕ್ ವಲಯವನ್ನು ಮಾಡಿಕೊಂಡು, ಸಾಮಾನ್ಯರೊಂದಿಗೆ ಸಂವಾದ ನಡೆಸದೆ, ಅವರ ಆಲೋಚನೆ, ಚಿಂತನೆಗಳಿಗೆ ಎರವಾಗುತ್ತೇವೆ. ಅವರು 'ಜೀವದ ಗುಟುಕು' ಎನ್ನುತ್ತಾರೆ. ಯಾರಿಗೂ ಇದರ ಅರ್ಥ ಹೇಳುವುದು ಕಷ್ಟ. ವೇದಾಂತಿಗಳು ಉಸಿರು ಹೋಗುವಾಗ ಬಳಸುವ ಪದ ಮತ್ತು ಧಾರ್ಮಿಕ ಸಂದರ್ಭದ ವಿಧಿ. ಕನ್ನಡ ಬಳಸ್ಬೇಕು ಅನ್ನೋ ಹೈಟೆಕ್ ಕನ್ನಡಿಗರಾದ ನಾವು, ಸಾಮಾನ್ಯರ ಕನ್ನಡವನ್ನೇ ಮರೆಯುತ್ತಿದ್ದೇವೆ. ಕನ್ನಡ ಅಭಿವೃದ್ಧಿ ತಯಾರಿಸಿ, ಕೋಟಿಗಟ್ಟಲೆ ಪ್ರತಿವರ್ಷ ಸುರಿಯುತ್ತಿದ್ದೇವೆ. ನಮಗೆ ಕನ್ನಡದ ಜೀವನಾಡಿಯನ್ನೇ ಹಿಡಿಯಲು ಇದು ವರೆವಿಗೂ ಸಾಧ್ಯವಾಗುತ್ತಿಲ್ಲ. ಮೂರ್ತ ಮತ್ತು ಅಮೂರ್ತ ಚಿಂತನೆಗಳ ಅಂತರ ದಿನೇ ದಿನೇ ಹೆಚ್ಚುತ್ತಿದೆ.

ಆಗಮ ಅಂದರೆ ತಂತ್ರ ಸಿದ್ಧಾಂತಗಳನ್ನು ವಾಮ, ಮಂತ್ರ ವಾದ, ಯಂತ್ರವಾದ, ಔಷಧವಾದ, ಕರ್ಮ್ಮವಾದ, ಅದ್ವೈತ ವಾಮ, ದ್ವೈತವಾಮ, ಮಿಶ್ರವಾಮ, ವಾಮ ಸಿದ್ಧಾಂತ ಎಂದು ವಿಂಗಡಿಸಿದ್ದಾರೆ. ತಂತ್ರಗಳಲ್ಲಿ ಅದ್ವೈತವಾದಕ್ಕೆ ಅವಕಾಶವಿದೆ. ತಂತ್ರ ಮುಖ್ಯವಾಗಿ ಹೆಣ್ಣು ಗಂಡಿನ ಸಂಬಂಧದ್ದು. ಅಲ್ಲಮ ತಂತ್ರವನ್ನು ಶಿವತತ್ವದಿಂದ ವ್ಯಾಖ್ಯಾನಿಸುತ್ತಾನೆ. ಅವನಿಗೆ ತಂತ್ರದಲ್ಲಿ ಅದ್ವೈತವಾದ ಮುಖ್ಯವಾದುದು. ಅವನು ಮಿಕ್ಕ ಸಿದ್ಧಾಂತಗಳನ್ನು ಮಾನ್ಯ ಮಾಡುವುದಿಲ್ಲ. ಅಲ್ಲಮ ತಂತ್ರದಲ್ಲಿ ಸಹಜ ಸಾಧನೆಗೆ ಒಪ್ಪಿ, ಮಿಕ್ಕ ತಂತ್ರದ ಸಾಧನೆಗಳನ್ನು ತಿರಸ್ಕರಿಸುತ್ತಾನೆ.

***ಘಟಿಕಾ ಸಿದ್ಧರ ಘಟಿಕೆಯುರುಳಿತ್ತು. ಯಂತ್ರಾಗಳ ಯಂತ್ರ ಎದ್ದು ಹೋಯಿತ್ತು. ಮಂತ್ರಿಗಳ ಮಂತ್ರ ಮರೆತುಹೋಯಿತ್ತು. ಔಷಧಿಗಳ ಔಷಧವನಾರಡಿಗೊಂಡಿತ್ತು. ಸರ್ವ ವಿದ್ಯಾಮುಖದ ಜ್ಯೋತಿ ನಂದಿತ್ತು. ಈ ವಿಷಯದ ಲಹರಿಯಲ್ಲಿ ಮೂರು ಲೋಕದವರೆಲ್ಲರೂ ಮೂರ್ಛಿತ ರಾದರು ಕಾಣಾ ಗುಹೇಶ್ವರ.***

ಅ.ವ.ಚಂ. ವ. ೭೧೬ ಪು. ೧೫೬

ರಸವಿದ್ಯೆ, ಯಂತ್ರ, ಮಂತ್ರ, ಔಷಧಿ ಮುಂತಾದ ತಂತ್ರ ಸಾಧನೆಯಲ್ಲಿ ತೊಡಗಿದವರನ್ನು ಅಲ್ಲಗಳೆಯುತ್ತಾನೆ. ಅಲ್ಲಮನಿಗೆ ತಂತ್ರದ ಈ ಯಾವ ಸಾಧನೆಗಳೂ ಬೇಕಿಲ್ಲ ಅಲ್ಲದೆ

***ನಾರು ಬೇರಿನ ಕುಟಿಲ ಕಪಟದ ಯೋಗವಲ್ಲಿರು ನಿಲ್ಲಿ ಭೋ***
***ಕಾಯ ಸಮಾಧಿ ಕರಣ ಸಮಾಧಿಯೋಗವಲ್ಲಿದು ನಿಲ್ಲಿ ಭೋ!***
***ಜೀವ ಸಮಾಧಿಯೆಂಬುದಿಲ್ಲ ನಿಜ ಸಹಜ ಸಮಾಧಿ ಗುಹೇಶ್ವರ***

ಅ.ವ.ಚಂ. ವ. ೭೧೬ ಪು. ೧೫೬

ಮತ್ತು ಬರುವ ನಾರು ಬೇರಿನ ಕುಟಿಲ ಯೋಗವನ್ನು ಖಂಡಿಸುತ್ತಾನೆ. ತಂತ್ರಗಳನ್ನು ಮೋಸಕ್ಕೂ ಬಳಸುವುದನ್ನು ಅಲ್ಲಮ ಒಪ್ಪುವುದಿಲ್ಲ. ಅದೂ ಅಲ್ಲದೆ ತಂತ್ರ ಸಾಧಕರ ಅತ್ಯಂತ ಹೇಸಿಗೆ ಬರುವಂತಹ ಹೀನ ಕೃತ್ಯಗಳಿಂದ ಜನರನ್ನು ದಾರಿ ತಪ್ಪಿಸುವುದಕ್ಕೆ ಅಲ್ಲಮನ ತೀವ್ರ ವಿರೋಧವಿದೆ. ಮುಂದಿನ ವಚನದಿಂದ ತಂತ್ರದ ಹೆಸರಿನಲ್ಲಿದ್ದ ದುಷ್ಟ ಆಚರಣೆಗಳನ್ನು ಅರಿಯಬಹುದು.

***ಹಠಯೋಗ ಲಂಬಿಕೆಯೆಂದು, ಆಕುಂಚನವೆಂದು, ವಜ್ರ ಅಮರಿಯ ಕಲ್ಪವೆಂದು ಮನಮೂತ್ರಂಗಳಂ ಸೇವಿಸುತ, ಇದು ಪೂರ್ವ ನವನಾಥ ಸಿದ್ಧರ ಮತೋಕ್ತವೆಂದು ಕಾಪಾಲಾಚರಣೆಯನಾಚರಿಸುವರಲ್ಲ್ ಶರಣರು! ವೇಣು ತಲೆಯೊಳಗಣ ವಾತ ಪಿತ್ತ ಶ್ಲೇಶವ ತೆಗೆದು ಅಮೃತವೆಂದು ಬಿನುಗು ದೃಷ್ಟವ ತೋರುವರಲ್ಲ ಶರಣರು / ದ್ರವಿಸುವ ದೇಹದಲ್ಲಿ ಅಪ್ಪುವಿನ ಫಲರಸಕ್ಷೀರ ಮೊದಲಾದವ ಸೇವಿಸುತ್ತ, ಅನ್ನವ ಬಿಟ್ಟೆವೆಂಬ ಭೂತಚೇಷ್ಟಕರಲ್ಲ ಶರಣರು. ಇವೆಲ್ಲವೂ ಕಾಹು ಸಟೆ ಭ್ರಾಂತೆಂದು ತಿಳಿದು ನಿರ್ಧಾರ ನಿಜದಿ ನಿಂದರು ಗುಹೇಶ್ವರ ನಿಮ್ಮ ಶರಣರು ಅಗ್ರಗಣ್ಯರು.***

ಅ.ವ.ಚಂ. ವ. ೮೦೮ ಪು. ೧೭೯

ಈ ವಚನದಲ್ಲಿ ಮಂತ್ರ ಸಾಧಕರನ್ನು ಛೇಡಿಸಲಾಗಿದೆ. ಮಂತ್ರ ಸಾಧಕರು ದೇವಿಯ ಮುಂದೆ ನಿಂತು, ತಲೆ ಕತ್ತರಿಸಿಕೊಂಡು, ದೇಹದಲ್ಲಿ ಹಾಗೆ ಇರಿಸಿಕೊಂಡು, ತಮ್ಮ ಯೋಗಾಗ್ನಿಯಿಂದ ಹೃದಯ ಕಮಲವನ್ನು ಹತ್ತಿಸುತ್ತಾರೆ. ಕೆಲವರು ರುಂಡವನ್ನು ಕತ್ತರಿಸಿಕೊಂಡು, ಕೈಯಲ್ಲಿ ಹಿಡಿದು, ದೇವಿಯ ದೇವಾಲಯದ ಸುತ್ತ ಪ್ರದಕ್ಷಿಣೆ ಮಾಡುತ್ತಾರೆ.

ಮಂತ್ರ ಸಾಧಕರು ದೇಹ ಮತ್ತು ತಲೆಯ ಮೇಲೆ, ದೇವಿ ಮುಂದೆ ನಿಂತು ದೀಪ ಉರಿಸುತ್ತಾರೆ. ಈಗಲೂ ತಂಜಾವೂರಿನ ದೇವಾಲಯದಲ್ಲಿ ಈ ಪದ್ಧತಿ ರೂಢಿಯಲ್ಲಿದೆ. ಇದು ಶಾಕ್ತ ಆಚರಣೆ. ತಲೆ ಕತ್ತರಿಸಿ ದೇವಿಗೆ ಅರ್ಪಿಸುವುದು ಶಾಕ್ತದ ಪ್ರಾಚೀನ ಪದ್ಧತಿ. ಅಲ್ಲಮ ಇಂತಹ ತಾಂತ್ರಿಕ ಆಚರಣೆಗಳನ್ನು ಒಪ್ಪುವುದಿಲ್ಲ. ಅಲ್ಲಮ ನದು ಕೈದಿಲ್ಲದ ಕಲಿತನದ ಸಾಧನೆ. ತಮಿಳುನಾಡಿನ ಪುರಾತನರಲ್ಲಿಯೂ ಕೆಲವು ತಾಂತ್ರಿಕರು ಇದ್ದಾರೆ. ಇಂಥ ಯಾವ ತಾಂತ್ರಿಕ ಸಾಧನೆ ಮತ್ತು ಸಿದ್ಧಿಗಳನ್ನೂ ಅಲ್ಲಮ ಒಪ್ಪುವುದಿಲ್ಲ. ಅಷ್ಟೇ ಅಲ್ಲದೆ ವ್ರತ, ನೇಮದ ಹಿರಿಯರನ್ನೂ ಅಲ್ಲಗಳೆಯುತ್ತಾನೆ.

***ಪಕ್ಷದಾಶೆಯ ಹಿರಿಯರು ಕೆಲಬರು, ಬುದ್ಧಿಯಾಸೆಯ ಹಿರಿಯರು ಕೆಲಬರು, ಸಮತೆಯಾಸೆಯ ಹಿರಿಯರು ಕೆಲವರು, ಇವರೆಲ್ಲರೂ ತಮ್ಮ ನಿಜವ ತಾವರಿಯದೆ ತಪವನಾಚರಿಸಿದರು. ವೇಷ ನಿರ್ವಯಲಾಗಿ, ಆಶೆ ರೋಷವ ಬಿಟ್ಟು, ದಾಸೋಹಿ ಯಾಗಿದ್ದರೆ ಗುಹೇಶ್ವರ ಲಿಂಗವು ತಾನೆ.***

ಅ.ವ.ಚಂ. ವ. ೯೨೨ ಪು. ೨೦೫

ಈ ಎಲ್ಲಾ ಸಾಧನೆಗಳಿಗಿಂತ ಸಾಧಕನಿಗೆ ಸತ್ಕ್ರಿಯಾಚರಣೆ ಮುಖ್ಯವಾದುದು.

***ಕ್ರಿಯಾಮಥನವಿಲ್ಲದೆ ಕಾಣಬಂದುದೇ ಇಕ್ಷುವಿನೊಳಗಣ ಮಧುರ?***
***ಕ್ರಿಯಾಮಥನವಿಲ್ಲದೆ ಕಾಣಬಂದುದೇ ತಿಲದೊಳಗಣ ತೈಲ?***
***ಕ್ರಿಯಾಮಥನವಿಲ್ಲದೆ ಕಾಣಬಂದು ಕ್ಷೀರದೊಳಗಣ ಘೃತ?***
***ಕ್ರಿಯಾಮಥನವಿಲ್ಲದೆ ಕಾಣಬಂದುದೇ ಕಾಷ್ಟದೊಳಗಣ ಅಗ್ನಿ?***
***ಇದು ಕಾರಣ, ನಮ್ಮ ಗುಹೇಶ್ವರ ಲಿಂಗವ ತನ್ನೊಳರಿದೆನೆಂಬ***
***ಮಹಂತರಿಗಲ್ಲದೆ, ಸತ್ಕ್ರಿಯಾಚರಣೆಯೇ ಸಾಧನೆ ಕಾಣಿಭೋ!***

ಅ.ವ.ಚಂ. ವ. ೭೬೧, ಪು. ೧೬೯

*– ಮುಂದುವರೆಯುತ್ತದೆ.*

* ೭೬, ಅಪೂರ್ವ, ೫ನೇ ಮುಖ್ಯರಸ್ತೆ, ಮಾರುತಿ ಹೆಚ್.ಬಿ.ಸಿ.ಎಸ್. ಬಡಾವಣೆ, ಗುರಪ್ಪನಪಾಳ್ಯ ಬಿ.ಟಿ.ಎಂ. ೧ನೇಹಂತ, ಬೆಂಗಳೂರು.

# ಕ್ರಿಯಾಶೀಲತೆ, ಸಜ್ಜನಿಕೆ, ಸತ್ಸಂಗವೇ ಬಸವಣ್ಣನವರ ಬದುಕಿನ ಭಕ್ತಿ–ಶಕ್ತಿ

– ಸ.ರಾ. ಸುಳಕೂಡೆ *

***ಪೀಠಿಕೆ***

ಇಹದ ಬದುಕಿಗೆ ಪ್ರಥಮ ಪ್ರಾಶಸ್ತ್ಯವನ್ನು ಪಸರಿಸಿದ ಬಸವಣ್ಣ ಸದಾಚಾರವೇ ಶಿವನೊಲುಮೆ ಎಂದು ಮನವರಿಕೆ ಮಾಡಿಕೊಟ್ಟಿದ್ದಾರೆ. ಮಾನವ ಈ ಇಹದೊಳಗೆ ಸತ್ಯಶುದ್ಧ ಕಾಯಕದೊಳಗೆ ನಿರತಗೊಂಡು ದಯೆಯೇ ಧರ್ಮವೆಂದು ನಡೆದುಕೊಂಡರೆ ಸಕಲ ಸಂಪತ್ತನ್ನು ಪಡೆದು ಸಾಮರಸವುಳ್ಳ ಸುಖ, ಶಾಂತಿ, ನೆಮ್ಮದಿಯನ್ನು ಹೊಂದುವುದು ಸಾಧ್ಯವೆಂದು ಮನನ ಗೈದ ಬಸವಣ್ಣನವರು ಧಾರ್ಮಿಕ ನೆಲೆಯೊಂದಿಗೆ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಕಾಯಕ ಕ್ಷೇತ್ರಗಳಲ್ಲಿ ಗಣನೀಯ ಸಾಧನೆ ಮಾಡಿದ್ದು ಇಂದಿಗೂ ಮಾದರಿ ಯಾಗಿ ನಿಂತಿದೆ. ಪ್ರಜಾತಾಂತ್ರಿಕ ಮೌಲ್ಯಗಳನ್ನು ಜನ ಸಾಮಾನ್ಯರ ಮನೆ–ಮಾನಗಳಲ್ಲಿ ಬಿಂಬಿಸಿದ ಬಸವಣ್ಣನವರು ಸರ್ವರೂ ಸಮಾನರು, ಸಮ ಸಾರ್ಥ್ಯ ಹೊಂದಿ ದವರೆಂದು ಸಮಥಿಸಿದ್ದು ಐತಿಹಾಸಿಕ ಘಟನೆಗಳಲ್ಲಿ ಒಂದಾಗಿದೆ. ಜ್ಞಾನ–ಕ್ರಿಯೆಯೇ ಬದುಕಿನ ಪ್ರಗತಿಗೆ ಅಗತ್ಯವೆಂದ ಬಸವಣ್ಣನವರು ನಡೆದಂತೆ ನುಡಿದರು, ನುಡಿದಂತೆ ನಡೆದರು.

*ನುಡಿದರೆ ಮುತ್ತಿನ ಹಾರದಂತಿರಬೇಕು*
*ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು*
*ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು*
*ನುಡಿದರೆ ಲಿಂಗ ಮೆಚ್ಚಿ ಅಹುದಹುದೆನಬೇಕು*
*ನುಡಿಯೊಳಗಾಗಿ ನಡೆಯದಿದ್ದಡೆ,*
*ಕೂಡಲಸಂಗಮದೇವನೆಂತೊಲಿವನಯ್ಯಾ?*

ಬಸವಣ್ಣನ ಬದುಕು ಮಾನವನ ಆಶಾದಾಯಕ ವ್ಯಕ್ತಿತ್ವ ವಿಕಸನದ ಪಥವಾಗಿದೆ. ಜೀವನ್ನು ನೆಲೆಗೆ ಸದಾಚಾರ, ಸನ್ನಡತೆ, ಕಾಯಕ, ಸಜ್ಜನಿಕೆ, ಸತ್ಸಂಗ ಅಗತ್ಯವೆಂದು ನಂಬಿದ ಬಸವಣ್ಣನವರು ಎಲ್ಲರೂ ಕೂಡಿ ಬಾಳುವ ಮಾರ್ಗವನ್ನು ತೋರಿಸಿ ಸ್ವಾವಲಂಬಿ, ಸ್ವಾಭಿಮಾನದ ಸಮಾಜವನ್ನು ರೂಪಿಸಿದ್ದು ದಾಖಲಾರ್ಹ ಸಂಗತಿಯಾಗಿದೆ. ಮಾನವನ ಬದುಕಿನ ಸಾಫಲ್ಯಕ್ಕೆ ಅವಗುಣಗಳು ಕ್ರಿಯಾಶೀಲಗೊಳ್ಳದಂತೆ ಎಚ್ಚರಿಕೆಯನ್ನು ವಹಿಸುವುದು ಅಗತ್ಯವೆಂದು ತಿಳುವಳಿಕೆ ಮೂಡಿಸಿದ ಬಸವಣ್ಣನವರು ಮೂಢಾಚಾರ, ಕಂದಾಚಾರ ಗಳನ್ನು ಉಚ್ಚಾಟಿಸಿ, ಸಂಯಮ, ಸದುವಿನಯ ಬದುಕಿಗೆ ಭದ್ರಬುನಾದಿ ಹಾಕಿದರು. ಸಕಲರಿಗೂ ಲೇಸನ್ನೇ ತಂದ ಬಸವಣ್ಣನವರು ಕ್ರಿಯಾಶೀಲತೆ, ಸಜ್ಜನಿಕೆ, ಸತ್ಸಂಗಕ್ಕೆ ಚ್ಯುತಿ ಬರದಂತೆ ಬದುಕುವ ರೂಢಿಯನ್ನು ಸಾರ್ವತ್ರಿಕಗೊಳಿಸಿದರು. ಬಸವಣ್ಣನವರು ಚಲಾವಣೆಗೆ ತಂದ ಬದುಕಿ ನೊಳಗೆ ಮಾತು ಮತ್ತು ಕೃತಿಗೆ ಏಕತೆಯ ಗುರಿ ಇದೆ, ಭಕ್ತಿಯ ಶಕ್ತಿಯೂ ತುಂಬಿಕೊಂಡಿದೆ.

***ಕ್ರಿಯಾಶೀಲತೆ***

ಬಸವಣ್ಣನವರು ಕಾಯಕವೇ ಕೈಲಾಸ, ಕಾಯ ಕಾಯಕ ದೊಳಗೆ ಸವೆಯಬೇಕೆಂದು ನಡೆದುಕೊಂಡವರು. ಮಾನವನ ಮನಸ್ಸು ಅಲ್ಲ–ಸಲ್ಲದ ತಾಮಸ–ತವಕಗಳಲ್ಲಿಯೇ ಮುನ್ನಡೆ ಯುವಂತೆ ಪ್ರೇರೇಪಿಸುತ್ತಿರುವುದನ್ನು ಗಮನಿಸಿದ ಬಸವಣ್ಣ ನವರು ಹರಿದಾಡುವ ಮನ ಹದಗೊಳಿಸಲು ಕಾಯಕ ದೊಳಗೆ ನಿರತಗೊಳ್ಳುವುದೇ ಸರಳ ಮಾರ್ಗವೆಂಬುದನ್ನು ಕಂಡುಕೊಂಡು ಹಸನ್ನುಳ್ಳ ಬದುಕಿಗೆ ಬದ್ಧರಾಗಿ ಮಾದರಿ ಯಾದರು. ಸಕಲರೂ ಒಂದಿಲ್ಲೊಂದು ಸತ್ಯ–ಶುದ್ಧ ಕಾಯಕದೊಳಗೆ ನಿರತಗೊಳ್ಳುವುದೇ ಜೀವನದ ಧ್ಯೇಯವನ್ನಾಗಿಸಿಕೊಂಡ ಬಸವಣ್ಣನವರು ಕಾಯಕದ ಮೂಲಕ ತಾರತಮ್ಯ ಮೇಲು– ಕೀಳು ಭಾವನೆಗಳಿಂದ ಸಕಲರನ್ನು ಮುಕ್ತಗೊಳಿಸಿದರು. ನುಡಿದಂತೆ ನಡೆಯುವುದೇ ಕ್ರಿಯಾಶೀಲತೆ ಎಂದು ನಂಬಿದ ಬಸವಣ್ಣನವರು ತಮ್ಮ ಅನುಭಾವವನ್ನು ಹಂಚಿಕೊಂಡಿದ್ದು ಹೀಗಿದೆ :

*ಭಕ್ತ ಸುಭಾಷೆಯ ನುಡಿಯ ನುಡಿವೆ, ನುಡಿದಂತೆ ನಡೆವೆ,*
*ನಡೆಯೊಳಗೆ ನುಡಿಯ ಪೂರೈಸುವೆ,*
*ಮೇಲೆ ತೂಗುವ ತ್ರಾಸು ಕಟ್ಟಳೆ ನಿಮ್ಮ ಕೈಯಲ್ಲಿ*
*ಒಂದು ಜವೆ ಕೊರತೆಯಾದಡೆ*
*ಎನ್ನನದ್ದಿ ನೀನೆದ್ದು ಹೋಗು, ಕೂಡಲಸಂಗಮದೇವಾ.*

ನಡೆಯೊಳಗೆ, ನುಡಿಯ ಪೂರೈಸುವಲ್ಲಿ ಒಂದು ಜವೆ ಕೊರತೆಯಾಗದಂತೆ ನೋಡಿಕೊಳ್ಳಬೇಕೆಂಬ ಬಸವಣ್ಣನವರ ಕಳಕಳಿಯೊಡನೆ ಉನ್ನತ ಕ್ರಿಯಾಶೀಲತೆಯ ತುಡಿತ ತುಂಬಿಕೊಂಡಿದೆ. ಶಾರೀರಿಕ ಶ್ರಮಕ್ಕೆ ಒತ್ತು ಕೊಟ್ಟು ಬದುಕಿದ ಬಸವಣ್ಣನವರು ಅಂತಸ್ತು, ಅಧಿಕಾರ, ಸಂಪತ್ತು, ಏನೇ ಇದ್ದರೂ ಕಾಯಕ ಮಾಡಿಯೇ ಗಳಿಸಿ ಬಳಸಬೇಕೆಂದು ಸೂಚಿಸಿದ್ದಾರೆ. ಪರಾವಲಂಬಿ ಬದುಕು ಕಾಯದ ಮೂಲ ಉದ್ದೇಶವನ್ನೇ ವಿಫಲಗೊಳಿಸುತ್ತದೆಂಬ ಸಾರ್ವತ್ರಿಕ ಸತ್ಯವನ್ನು ಮನದಟ್ಟು ಮಾಡಿದ ಬಸವಣ್ಣನವರು ಸಕಲರು ಸತ್ಯ ಶುದ್ಧ ಕಾಯಕದೊಳಗೆ ಕ್ರಿಯಾಶೀಲಗೊಳ್ಳಲು ಪ್ರೇರಣೆ ನೀಡಿದರು. ಅಂದಿನ ಕಲ್ಯಾಣನಗರದಲ್ಲಿ ಬೇಡುವವರಿಲ್ಲಿಲ್ಲ ಎಂಬ ಸಂಗತಿ ಜನರಲ್ಲಿದ್ದ ಕ್ರಿಯಾಶೀಲತೆಯನ್ನು ಸೂಚಿಸುತ್ತದೆ. ಕ್ರಿಯೆ ಬದುಕನ್ನು ಉನ್ನತಿಗೊಳಿಸುವ ಏಕೈಕ ಮಾರ್ಗವೆಂಬ ಆಧುನಿಕತೆಯ ಚಿಂತನೆಗೆ ಬಸವಣ್ಣನವರ ಕಾಯಕ ದಿಕ್ಸೂಚಿಯಾಗಿ ನೀಡಿದೆ. ಕ್ರಿಯಾಶೀಲತೆ ಕಳಕೊಂಡ ಜನಾಂಗ–ಸಂಸ್ಕೃತಿಗೆ ಉಳಿಗಾಲವಿಲ್ಲೆಂಬ ಸತ್ಯವನ್ನು ಬಸವಣ್ಣನವರು ಈ ಹಿಂದೆಯೇ ಹೇಳಿದ್ದು ಅವಲೋಕಿಸಿ ಕೊಳ್ಳುವ ಅಗತ್ಯತೆ ಇಂದಿನದಾಗಿದೆ.

**ಸಜ್ಜನಿಕೆ** : ಪಶು ಸಮಾನವಾಗಿದ್ದ ಮನುಷ್ಯನನ್ನು ಉನ್ನತ ಬದುಕಿಗೆ ಸಜ್ಜುಗೊಳಿಸುವ ಮೂಲ ಶಕ್ತಿ ಸೌಂದರ್ಯ ಸಜ್ಜನಿಕೆಯೇ ಆಗಿದೆ. ಸಜ್ಜನಿಕೆಯು ಮನುಷ್ಯ ಬದುಕಿಗೆ ಅನಿವಾರ್ಯ ಪೋಷಕಾಂಶವಾಗಿದೆ. ಬಸವಣ್ಣನವರು ತಮ್ಮ ಬದುಕಿನುದ್ದಕ್ಕೂ ಸಜ್ಜನಿಕೆಗೆ ಸೂಕ್ತವಾದ ಪ್ರಾಶಸ್ತ್ಯ ವನ್ನು ಕೊಟ್ಟಿರುವುದನ್ನು ಕಾಣುತ್ತೇವೆ. ಸರ್ವಜನಾಂಗಕ್ಕೂ ಸರ್ವಕಾಲಕ್ಕೂ ಅನ್ವಯವಾಗಿರುವ ಸಜ್ಜನಿಕೆಯ ಸೂತ್ರ ಗಳನ್ನು ಅವರು ಒಂದು ವಚನದೊಳಗೆ ಹೀಗೆ ಹೇಳಿದ್ದಾರೆ

*ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ*
*ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ,*
*ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡಾ*
*ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗಶುದ್ಧಿ*
*ಇದೇ ನಮ್ಮ ಕೂಡಲಸಂಗಮದೇವರನೊಲಿಸುವ ಪರಿ*

ಮಾನವ ಬದುಕಿಗೆ ಸುಖ, ಶಾಂತಿ, ನೆಮ್ಮದಿಯೊಂದಿಗೆ ಸಜ್ಜನಿಕೆಯನ್ನು ತಂದುಕೊಡುವ ಈ ಸೂತ್ರಗಳೊಂದಿಗೆ ಬಸವಣ್ಣನವರು ಈ ವಚನ ಉಲ್ಲೇಖನೀಯ.

*ತೊರೆಯ ಮೀವ ಅಣ್ಣಗಳಿರಾ, ತೊರೆಯಮೀವ*
*ಸ್ವಾಮಿಗಳಿರಾ, ತೊರೆಯಿಂ ಭೋ! ತೊರೆಯಿಂ ಭೋ!*
*ಪರನಾರಿಯರ ಸಂಗವ ತೊರೆಯಿಂ ಭೋ!*
*ಪರಧನದಾಮಿಷವ ತೊರೆಯಿಂ ಭೋ !*
*ಇವ ತೊರೆಯದೆ ಹೋಗಿ ತೊರೆಯ ಮಿಂದಡೆ*
*ಬರುದೊರೆ ಹೋಹುದು, ಕೂಡಲಸಂಗಮದೇವಾ.*

ಸಜ್ಜನಿಕೆಯನ್ನು ಗಳಿಸಿಕೊಳ್ಳುವುದೆಂದರೆ ಸತ್ಯ, ಪ್ರಾಮಾಣಿಕತೆ ಮತ್ತು ಪರೋಪಕಾರ ಪರಹಿತದೊಳಗೆ ದೃಢತೆಯನ್ನು ಹೊಂದುವುದಾಗಿದೆ. ಜಗದೊಳಗೆ ಬಹಳಷ್ಟು ಆಚಾರ–ವಿಚಾರಗಳನ್ನು ನೀತಿ ಸಂಹಿತೆಗಳು, ಕಾನೂನು–ಕಟ್ಟಳೆಗಳು, ಆದರ್ಶ–ಆದ್ಯತೆಗಳು ಇದ್ದರೂ ಸಜ್ಜನಿಕೆಯ ಕ್ರಿಯಾಶೀಲತೆಗೆ ಬದ್ಧತೆ ಉಳಿಸಿಕೊಳ್ಳದೇ ಸೊರಗಿವೆ. ಆಚರಣೆಯಿಂದಲೂ ದೂರಾಗಿ ಹೋಗಿವೆ. ಸಜ್ಜನಿಕೆ ಗಳಿಸಿಕೊಂಡು ಸಂತೃಪ್ತ ವುಳ್ಳ ಬದುಕನ್ನು ನಡೆಸುವುದೆಂದರೆ ಜ್ಞಾನೇಂದ್ರಿಯಗಳನ್ನು ಸನ್ಮಾರ್ಗದೊಳಗೆ ಕ್ರಮಿಸುವಂತೆ ದುಡಿಸುವುದೇ ಆಗಿದೆ. ಮನುಷ್ಯ ತನ್ನದೆಲ್ಲವನ್ನು, ಅನ್ಯರ ಹತ್ತಿರವಿರುವುದನ್ನು ಕಿತ್ತು ಕೊಳ್ಳುವ ಆಸೆಯುಳ್ಳವನಾಗಿರುವ ಸಹಜ ಹೇಮಕೃತ್ಯವನ್ನು ತಡೆಯುವುದೆಂದರೆ ಸಜ್ಜನಿಕೆಯನ್ನು ಪರಿಪಾಲಿಸಿಕೊಂಡು ಬರುವುದೇ ಆಗಿದೆ. ಆಧುನಿಕ ಯುಗದೊಳಗೆ ಸಂಪತ್ತು, ಸವಲತ್ತು, ಸೌಕರ್ಯ, ಅಧಿಕಾರ, ಸಂಪರ್ಕ, ಸುಖ ಸಂತೋಷ ಕೂಟಗಳ ಸೌಲಭ್ಯ ಆರ್ಥಿಕ ನೆರವು, ತಂತ್ರ ಜ್ಞಾನದ ಶರವೇಗ ಸಮಾಗಮಗೊಂಡಿದ್ದರೂ ಎಲ್ಲೆಲ್ಲೂ ಅಶಾಂತಿ, ಖಿನ್ನತೆ, ಹತ್ಯಾಕಾಂಡ, ಆತ್ಮಹತ್ಯೆ, ಅಪಹರಣ, ಅಕ್ರಮ, ಆಕ್ರಮಣ ಗಳೆಲ್ಲವೂ ಹೆಚ್ಚುತ್ತಲಿವೆ. ಮನುಷ್ಯನಲ್ಲಿಯ ಮೃಗತ್ವ ತನ್ನ ಎಲ್ಲ ಕರಾಳಮುಖವನ್ನು ತೋರಿಸುತ್ತಲಿದೆ. ಇದಕ್ಕೆಲ್ಲ ಮನುಷ್ಯನ ದುರಾಚರಣೆಯೇ ಕಾರಣವಾಗಿದೆ. ಇದನ್ನೇ ಬಸವಣ್ಣನವರು ಹೀಗೆ ವ್ಯಾಖ್ಯಾನಿಸಿದ್ದಾರೆ.

* ಹಿರಿಯ ನ್ಯಾಯವಾದಿಗಳು, ಮೈಸೂರು.

*ಮಾರಿ ಮಸಣಿಯೆಂಬವು ಬೇರಿಲ್ಲ ಕಾಣಿರೋ*
*ಕಂಗಳು ತಪ್ಪಿ ನೋಡಿದಡೆ ಮಾರಿ,*
*ನಾಲಿಗೆ ತಪ್ಪಿ ನುಡಿದಡೆ ಮಾರಿ,*
*ನಮ್ಮ ಕೂಡಲಸಂಗಮದೇವರ ನೆನಹ ಮರೆದಡೆ ಮಾರಿ.*

ಮನುಷ್ಯ ತನ್ನ ಅಂಗ-ಅಂಗಗಳಲ್ಲಿ ಮಾರಿ-ಮಸಣಿಯನ್ನು ಹರವಿಕೊಂಡು ಹರಿದಾಡುವ ಅಹಂಕಾರಕ್ಕೆ ಒಳಗಾಗಿರುವುದರಿಂದ ತಪ್ಪುಗಳೇ ಘಟಿಸುವುದರಲ್ಲಿ ಅಚ್ಚರಿಪಡಬೇಕಾಗಿಲ್ಲ. ಸದಾಚಾರ ನಮ್ಮೊಳಗೆ ಬಾರದೇ ಹೋದರೆ ಸನ್ಮತಿ, ಸತ್ಕೀರ್ತಿಗಳನ್ನು ಗಳಿಸಲು ಎಂದೂ ಸಾಧ್ಯವಾಗಲಾರದು.

*ಎಲ್ಲಿ ನೋಡಿದಡಲ್ಲಿ ಮನವೆಳಸಿದಡೆ*
*ಆಣೆ, ನಿಮ್ಮಾಣೆ ನಿಮ್ಮ ಪ್ರಮಥರಾಣೆ*
*ಪರವಧುವನು ಮಹಾದೇವಿಯೆಂಬೆ*
*ಕೂಡಲಸಂಗಮದೇವಾ*

ಮಾನವನು ಸಂಯಮವನ್ನು ಪಡೆದುಕೊಂಡು ಅಡ್ಡದಾರಿಗಳನ್ನು ತೊರೆದಷ್ಟು ಸಜ್ಜನಿಕೆ ಸಾಕಾರಗೊಳ್ಳುತ್ತದೆಂಬುದು ಬಸವಣ್ಣನವರ ಸ್ಪಷ್ಟ ಅಭಿಮತವಾಗಿದೆ. ಜನಜೀವನದೊಳಗೆ ಒಬ್ಬರನ್ನೊಬ್ಬರು ತುಳಿದು ಬದುಕುವುದೇ ಶ್ರೇಷ್ಠತೆ ಎಂದು ಬೋಗುವುದನ್ನು ಬಿಡುವ ಅಗತ್ಯ ಇಂದಿನದಾಗಿದೆ. ಅಹಂಕಾರ, ಧೂರ್ತತನ, ದಬ್ಬಾಳಿಕೆ, ಅಳಿದಷ್ಟು ಸಜ್ಜನಿಕೆ ಸಜ್ಜುಗೊಳ್ಳುತ್ತದೆ. ಹಿರಿದು-ಕಿರಿದು ಗೊಂಚಲ ತೊರೆಯುವು ದೆಲ್ಲವೂ ಸಜ್ಜನಿಕೆಯನ್ನು ತರಬಲ್ಲದು. ಈ ದಿಶೆಯೊಳಗೆ ನಮ್ಮ ನಡೆ-ನುಡುಗಳೆಲ್ಲವೂ ರೂಪುಗೊಳ್ಳಬೇಕಾಗಿದೆ.

**ಸತ್ಸಂಗ :** ಸತ್ಸಂಗಕ್ಕಿಂತ ಮಿಗಿಲಾದ ಬದುಕಿಲ್ಲ. ಬದುಕಿನ ತತ್ವವಿಲ್ಲ. ಸತ್ಸಂಗದೊಳಗೆ ನೆಲೆಸುವುದೆಂದರೆ ತನ್ನ ವೈಭವೀಕರಣವನ್ನು ತೊರೆಯುವುದಾಗಿದೆ. ಸಕಲರೊಂದಿಗೆ ಸಹಕರಿಸುತ್ತ ಅಚಲ ವಿಶ್ವಾಸ ನಂಬಿಕೆಗಳಿಂದ ವ್ಯವಹರಿಸುತ್ತ, ಮಾನವ ಘನತೆ ಗೌರವಗಳನ್ನು ಪರಿಪಾಲಿಸುತ್ತ ಬದುಕು ವುದೆಲ್ಲವೂ ಸತ್ಸಂಗದ ಕುರುಹಾಗಿದೆ. ಸತ್ಸಂಗವನ್ನೇ ಬಸವಣ್ಣನವರು ರೂಢಿಸಿಕೊಂಡಿದ್ದರಿಂದ ಜಗತ್ತಿನಲ್ಲಿ ಮಾನವ ಮಹತಿಯ ತತ್ತ್ವ-ಆದರ್ಶಗಳನ್ನು ಬಸವಣ್ಣನವರು ಚಲಾವಣೆಗೆ ತರಲು ಸಾಧ್ಯವಾಯಿತು.

ಬಸವಣ್ಣನವರು ಮಾನವನ ಬದುಕು ಸಹ್ಯ-ಸಭ್ಯತೆಗೆ ಕಂಕಣಬದ್ಧಗೊಳ್ಳಬೇಕಾದರೆ ಮಾನವೀಯ ಗುಣವಿಶೇಷತೆಯನ್ನು ಹೊಂದಿರುವ ಸಂಗ ದೊರೆಯಬೇಕೆಂಬ ಸದಾಶಯವನು ಹೊಂದಿದ್ದಾರೆ. ಆದರೆ ಒಳ್ಳೆಯ ಸಂಗದಂತೆ ಒಳ್ಳೆಯ ನಡತೆಯೂ ಅಗತ್ಯವಾಗಿದೆ.

*ಎನಿಸು ಕಾಲ ಕಲ್ಲು ನೀರೊಳಗಿದ್ದಡೇನು,*
*ನೆನೆದು ಮೃದುವಾಗಬಲ್ಲುದೆ ?*
*ಎನಿಸು ಕಾಲ ನಿಮ್ಮ ಪೂಜಿಸಿ ಏವೆನಯ್ಯಾ,*
*ನಿಧಾನವ ಕಾಯ್ದಿರ್ದ ಬೆಂತರನಂತೆ*
*ಅದರ ವಿಧಿ ಎನಗಾಯಿತ್ತು ಕೂಡಲಸಂಗಮದೇವಾ.*

ಮನುಷ್ಯ ತನ್ನ ಬದುಕಿನ ಶಿಲ್ಪಿ ತಾನೇ ಆಗಿದ್ದಾನೆ. ಒಳ್ಳೆಯ ಬದುಕನ್ನು ಆಯ್ಕೆ ಮಾಡಿಕೊಂಡವರೆಂದೂ ದುರ್ಮಾರ್ಗಕ್ಕೆ ಇಳಿಯಲಾರದು ಮತ್ತು ದುರ್ಜನರ ಸಹವಾಸವನ್ನು ತಪ್ಪಿಯೂ ಕೂಡಿಕೊಳ್ಳಲಾರದು. ದುರ್ಜನರನ್ನು ಕೂಡಿಕೊಳ್ಳುವುದೆಂದರೆ ಅಮಾನುಷ್ಯತ್ವಕ್ಕೆ ಒಳಗೊಳ್ಳುವುದೇ ಆಗಿದೆ.

*ಸಾರ : ಸಜ್ಜನರ ಸಂಗವ ಮಾಡುವುದು*
*ದೂರ : ದುರ್ಜನರ ಸಂಗ ಬೇಡವಯ್ಯಾ*
*ಆವ ಹಾವಾದಡೇನು? ವಿಷವೊಂದೆ,*
*ಅಂತವರ ಸಂಗ ಬೇಡವಯ್ಯ*
*ಅಂತರಂಗ ಶುದ್ಧವಿಲ್ಲದವರ ಸಂಗವು*
*ಸಿಂಗಿ, ಕಾಳಕೂಟ ವಿಷವೊ, ಕೂಡಲಸಂಗಯ್ಯಾ.*

ಸತ್ಸಂಗಗಳು ಬೆಳೆದಷ್ಟು ಮನುಷ್ಯ ಬದುಕು ಮಧುರಾತಿ ಮಧುರಫಲಗಳನ್ನು ಪಡೆದುಕೊಳ್ಳುತ್ತದೆ. ದುಷ್ಟಕೂಟಗಳಲ್ಲಿಯೇ ನಮ್ಮ ಕಷ್ಟಗಳ ತವರಾಗುತ್ತಲೇ ಸಾಗುತ್ತಲಿದೆ. ಬಸವಣ್ಣನವರು ತಮ್ಮ ಬದುಕಿಗೆ ಸ್ಫೂರ್ತಿ ಬೆಂಬಲವಾಗಿ ನಿಂತ ಸಂತ್ಸಂಗವನ್ನು ಬೆಳೆಸುವ ಅಗತ್ಯತೆಯ ಆಹ್ವಾನವನ್ನು ನೀಡಿದ್ದಾರೆ. ಮಾನವನ ಬದುಕು ನಿಶ್ಚಿಂತ ಸುಖ-ಶಾಂತಿ-ನೆಮ್ಮದಿಗಳನ್ನು ಪಡೆಯುವ ಅವಕಾಶ ಪಡೆಯುವ ಶಕ್ಯತೆಯು ಸತ್ಸಂಗವನ್ನೇ ಅವಲಂಬಿಸಿದೆ. ಸತ್ಸಂಗದಿಂದಲ್ಲೇ ಮನುಷ್ಯ ಬದುಕು ಉನ್ನತಿ ಪಡೆಯಲು ಸಾಧ್ಯ.

**ಉಪಸಂಹಾರ :** ಮಾನವೀಯ ಸಂಬಂಧಗಳು ಅತ್ಯಂತ ಹೀನಾಯ ಹೀನವಾದ ಸನ್ನಿವೇಶದೊಳಗೆ ತೊಳಲಾಡುತ್ತಿರುವ ಇಂದಿನ ದಿನಮಾನಗಳಲ್ಲಿ ಬಸವಣ್ಣನವರು ನಡೆದು ಬಿನ್ನವಿಸಿದ ಜೀವನ ವಿಧಾನವನ್ನು ರೂಢಿಗತಗೊಳಿಸಿಕೊಳ್ಳುವ ಅಗತ್ಯವಿದೆ. ಮನುಷ್ಯನೊಳಗೆ ಸದುವಿನಯ, ಸದಾಚಾರ, ಸಜ್ಜನಿಕೆ, ಸತ್ಸಂಗಗಳೆಲ್ಲವನ್ನು ಚೇತನ ಗೊಳಿಸದೇ ಹೋದರೆ ಬಹು ಪರಿಶ್ರಮದಿಂದ ಸಾಧಿಸಿದ ಎಲ್ಲ ಪ್ರಗತಿಗಳು ವಿಗತಿಗೊಳ್ಳದೇ ಇರಲಾರವು. ಇಂದು ಬಸವಣ್ಣ ನವರು ಚಾಲ್ತಿಗೆ ತಂದ ಛಲಗಾರಿಕೆಗಳಿಂದಲೇ ಸುಸೂತ್ರ ಬದುಕು ಎಂಬುದನ್ನು ಮರೆಯಬಾರದು.

*ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ*
*ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ*
*ಛಲಬೇಕು ಶರಣಂಗೆ ಪರದೈವವನೊಲ್ಲೆನೆಂಬ*
*ಛಲಬೇಕು ಶರಣಂಗೆ ಲಿಂಗಜಂಗಮವನೊಂದೆಂಬ*
*ಛಲಬೇಕು ಶರಣಂಗೆ ಪ್ರಸಾದ ದಿಟವೆಂಬ*
*ಛಲವಿಲ್ಲದವರ ಮೆಚ್ಚ ಕೂಡಲಸಂಗಮದೇವ.*

ಮನುಷ್ಯ ತನ್ನ ಇರುವಿಕೆಗೆ ಶೋಭೆಯನ್ನು ತಂದುಕೊಳ್ಳುವುದಕ್ಕೆ ಛಲಗಾರಿಕೆ ತೋರಿಸುವ ಅಗತ್ಯವಿದೆ. ಅಂದರೆ ತನ್ನ ಕೌಟುಂಬಿಕ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ, ವೈಜ್ಞಾನಿಕ ವಲಯಗಳಲ್ಲಿ ಸತ್ಯ, ಶುದ್ಧ, ಕಾಯಕದೊಳಗೆ ತೊಡಗಿಕೊಂಡು ಸಜ್ಜನಿಕೆಯನ್ನು ಎಚ್ಚರಿಕೆಯಿಂದ ಕಾಪಾಡಿಕೊಂಡು ಸತ್ಸಂಗದೊಳಗೆ ತನ್ನ ಶಕ್ತಿಯನ್ನು ವ್ಯಯಿಸುವಲ್ಲಿ ಮುಂದಾಗಬೇಕಿದೆ. ಅಂದರೆ ಬಸವಣ್ಣನವರ ಬದುಕಿನ ಎಲ್ಲ ಹೆಜ್ಜೆಗಳನ್ನು ಅರಿತು ಕೊಂಡು ದುಡಿಮೆ ಮಾಡಬೇಕಿದೆ.

❑

ತಾ ಮಾಡಿದ ಹೆಣ್ಣು ತನ್ನ ತಲೆಯನೇರಿತ್ತು
ತಾ ಮಾಡಿದ ಹೆಣ್ಣು ತನ್ನ ತೊಡೆಯನೇರಿತ್ತು
ತಾ ಮಾಡಿದ ಹೆಣ್ಣು ಬ್ರಹ್ಮನ ನಾಲಿಗೆಯೇನೇರಿತ್ತು
ತಾ ಮಾಡಿದ ಹೆಣ್ಣು ನಾರಾಯಣನ ಎದೆಯನೇರಿತ್ತು
ಅದು ಕಾರಣ, ಹೆಣ್ಣು ಹೆಣ್ಣಲ್ಲ ಹೆಣ್ಣು ರಾಕ್ಷಸಿಯಲ್ಲ;
ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧಮಲ್ಲಿಕಾರ್ಜುನ ನೋಡಾ!

*- ಸಿದ್ಧರಾಮೇಶ್ವರ*

## ಶ್ರೀವಾಣಿ

ಜೀವನವೆನ್ನುವುದು ಒಂದು ಕಲೆ. ಸಂಗೀತ, ಸಾಹಿತ್ಯಾದಿ ಕಲೆಗಳಿದ್ದಂತೆ. ಕಲೆಯ ಸಿದಿಗೆ ಸಾಧನೆ ಮುಖ್ಯ. ಸಂಗೀತವನ್ನು ಶಾಸ್ತ್ರೀಯವಾಗಿ ಹಲವಾರು ವರ್ಷಗಳ ಕಾಲ ಆ ಕಲೆಯನ್ನು ರೂಢಿಸಿಕೊಂಡ ಸಂಗೀತಗಾರ ಮಧುರವಾಗಿ ಹಾಡಿದರೆ ಶ್ರೋತೃಗಳಿಗೆ ಕರ್ಣಾನಂದ ವಾಗುತ್ತದೆ. ಆದರೆ ಅಭ್ಯಾಸವಿಲ್ಲದೆ ಕಲೆಯ ಗಂಧವಿಲ್ಲದವನು ಹಾಡಿದರೆ ಅದು ಗಾರ್ದಭ ಸಂಗೀತವಾಗುತ್ತದೆ. ಅದರಂತೆ ಸಾಹಿತ್ಯಾಭ್ಯಾಸವಿಲ್ಲದವನು ಸಾಹಿತ್ಯ ರಚನೆ ಮಾಡಿದರೆ ಅಪಹಾಸ್ಯಕ್ಕೆ ಗುರಿಯಾಗಬೇಕಾಗುತ್ತದೆ. ಅದರಂತೆ ಜೀವನ ಕಲೆಯನ್ನು ಅರಿಯದವನು ಸಮಾಜದಲ್ಲಿ ಹಗುರನಾಗಬೇಕಾಗುವುದು. ಆದರೆ ಈ ಜೀವನ ಕಲೆ ಒಂದು ದಿವಸದಲ್ಲಿ, ಒಂದು ತಿಂಗಳಲ್ಲಿ, ಒಂದು ವರ್ಷದಲ್ಲಿ ಬರುವಂಥದಲ್ಲ. ಆ ಕಲೆಯನ್ನು ರೂಢಿಸಿಕೊಳ್ಳಬೇಕಾದರೆ ಬದುಕಿನುದ್ದಕ್ಕೂ ನಿರಂತರ ಸಾಧನೆಯು ನಡೆಯಬೇಕು "ಯಾವ ಮನುಷ್ಯನಲ್ಲಿಯೂ ನೂರಕ್ಕೆ ನೂರರಷ್ಟು ದುಷ್ಟಗುಣಗಳೂ ಇರುವುದಿಲ್ಲ." ಇದು ತತ್ತ್ವಜ್ಞಾನಿಗಳ ಮಾತು. ಒಳ್ಳೆಯದೂ ಇದೆ ಕೆಟ್ಟದ್ದೂ ಇದೆ. ಕೆಟ್ಟಗುಣಗಳ ಸಂಖ್ಯೆಯನ್ನು ಕಡಿಮೆ ಮಾಡಿಕೊಂಡು ಒಳ್ಳೆಯ ಗುಣಗಳ ಸಂಖ್ಯೆಯನ್ನು ಬೆಳೆಸಿಕೊಂಡಾಗ ಆದರ್ಶಪುರುಷನಾಗುತ್ತಾನೆ. ಈ ಸಂಖ್ಯೆ ಹೆಚ್ಚಾದಾಗ ಲೋಕಪೂಜ್ಯನಾಗುತ್ತಾನೆ. ಈ ಒಂದು ಸಾಧನೆ ನಿರಂತರವಾಗಿ ನಡೆಯಬೇಕು. ನಡೆಯುವಾಗ, ನುಡಿಯುವಾಗ, ವ್ಯವಹರಿಸುವಾಗ ತಿದ್ದಿಕೊಳ್ಳಬೇಕು. ಇದು ಚಿಕ್ಕಂದಿನಿಂದಲೂ ನಡೆಯಬೇಕು. ಹೀಗೆ ಕ್ರಮವರಿತ ಸಾಧನೆ ಒಂದು ಶಕ್ತಿಯಾಗಿ ಬೆಳೆಯುತ್ತದೆ. ಇದನ್ನು ಇಚ್ಛಾ ಶಕ್ತಿ ಎಂದು ಕರೆಯುತ್ತಾರೆ' ಇಂಥ ಇಚ್ಛಾಶಕ್ತಿಯನ್ನು ಬೆಳೆಸಿಕೊಂಡಾಗ ಮಾತ್ರ ವ್ಯಕ್ತಿ ಲೋಕವಂದ್ಯವಾಗುತ್ತಾನೆ.

# ಸೊಗಸಾದ ಅಗರು
## Aquillaria agollacha Roxb Thymaliaceae

– ಡಾ॥ ಶೈಲೇಶ್ ಎಂ.ಡಿ. *

ನಮ್ಮ ದೇಶದಲ್ಲಿ ದೊರಕುವ ಸುಗಂಧಭರಿತ ದ್ರವ್ಯಗಳಲ್ಲಿ ಅಗರು ಕೂಡ ಒಂದು. ಪುರಾತನ ಕಾಲ ದಿಂದಲೂ ಸುಗಂಧಭರಿತ ವಸ್ತುವಾಗಿ, ಔಷಧಿಯಾಗಿ ಉಪ ಯೋಗಿಸಲ್ಪಡುತ್ತಿರುವ ಆಯುರ್ವೇದದ ಬಹುಮುಖ್ಯ ದ್ರವ್ಯ ಈ ದ್ರವ್ಯದ ವಿವರಣೆಯನ್ನು ಸಂಹಿತ, ನಿಘಂಟುಗಳಲ್ಲಿ ವಿವರವಾಗಿ ಕಾಣಬಹುದು. ಚರಕನು ಈ ದ್ರವ್ಯವನ್ನು 'ಶ್ವಾಸಹರ' 'ತಿಕ್ತಸ್ಕಂದಾ' ದಲ್ಲಿ ವಿವರಿಸಿದರೆ, ಸುಶ್ರುತನು ಈ ದ್ರವ್ಯವನ್ನು 'ಏಲಾದೀ' ವರ್ಗದಲ್ಲಿ ವಿವರಿಸಿದ್ದಾರೆ. ಆಚಾರ್ಯ ವಾಗ್ಭಟ ಈ ದ್ರವ್ಯವನ್ನು ವಿವರಿಸಿದ್ದಾರೆ. ಆಚಾರ್ಯ ವಾಗ್ಭಟ ಈ ದ್ರವ್ಯವನ್ನು 'ಏಲಾದೀ' 'ಸಾಲ ಸಾರದೀ' ವರ್ಗದಲ್ಲಿ ವಿವರಿಸಿದ್ದಾರೆ. ಅನೇಕ ನಿಘಂಟುಗಳಲ್ಲಿಯೂ ಕೂಡ ಈ ದ್ರವ್ಯವನ್ನು ವಿವರವಾಗಿ ವಿವರಿಸಲಾಗಿದೆ. ಅಗರು ಸುವಾಸನೆಯಿಂದ ಕೂಡಿರುವುದರಿಂದ ಇದನ್ನು ಧೂಪನವಾಗಿ ಹಿಂದಿನ ಕಾಲದಲ್ಲಿ ಉಪಯೋಗಿಸುತ್ತಿದ್ದರು. ಅಗರನ್ನು ಚಂದನ, ಕುಂಕುಮ, ಕರ್ಪೂರ, ಪದ್ಮಕದ ಲೇಪದೊಂದಿಗೆ ಬೆರೆಸಿ ದೇಹಕ್ಕೆ ಹಚ್ಚುತ್ತಿದ್ದ ಬಗ್ಗೆ ಉಲ್ಲೇಖವಿದೆ.

### *ಬಹು ಭಾಷಾ ಹೆಸರುಗಳು*

| | | |
|---|---|---|
| ಕನ್ನಡ | : | ಅಗರು, ಅಗಿಲುಗಂಧ |
| ಸಂಸ್ಕೃತ | : | ಅಗರು |
| ಹಿಂದಿ | : | ಅಗರ್ |
| ಇಂಗ್ಲಿಷ್ | : | ಈಗಲ್‌ವುಡ್ |
| ತುಳು | : | ಹಗಲ್‌ಗಂಧೊ, |

### *ಪರ್ಯಾಯ ಪದಗಳು*

ಅಗರು, ಅಗ್ನಿ, ಲೋಹ, ಧೂಪಗಮ್, ಕ್ರಿಮಿಜ, ರಾಜರ್ಹ, ಭೃಂಗ್‌ರಾಜ್, ಅಗ್ನಿಕಾಸ್ಥ, ವಂಶಿಕ್, ವನಧೃಮ, ಪುರಂ, ಮಲ್ಲಿಕಗಂಧ, ವಿಶ್ವರೂಪಕಮ್, ಪ್ರವರ, ಶ್ರೇಷ್ಠವೃಕ್ಷ.

ಅಗರು ಲೋಹದಂತೆ ಭಾರವಾಗಿರುವುದರಿಂದ ಇದನ್ನು 'ಲೋಹ' ಎಂದು, ಅಗರನ್ನು ಧೂಪವಾಗಿ ಉಪಯೋಗಿಸುವುದರಿಂದ 'ಧೂಪಗಮ್' ಎಂಬುದಾಗಿ ಸಂಸ್ಕೃತದಲ್ಲಿ ಕರೆಯುತ್ತಾರೆ.

### *ದ್ರವ್ಯದ ವರ್ಣನೆ*

ಅಗರು ಸದಾ ಹಸುರಾದ ಮರ. ಇದರ ತೊಗಟೆಯು ಮೃದುವಾಗಿ ಬಿಳಿ ಮಿಶ್ರಿತ ಬಣ್ಣದಿಂದ ಕೂಡಿದೆ. ತೊಗಟೆಯನ್ನು ತುಂಡರಿಸಿದಾಗ ಸುವಾಸನೆಯು ಹೊರಸೂಸುತ್ತದೆ. ಮರವು ದೊಡ್ಡದಾದಾಗ ಅದರ ಒಳಭಾಗವು ಕಪ್ಪು ಬಣ್ಣಕ್ಕೆ ತಿರುಗುತ್ತದೆ ಮತ್ತು ಅದರ ಸುವಾಸನೆ ಜೇನಿನ ಪರಿಮಳದಂತೆ ಇರುತ್ತದೆ. ಎಲೆಯು ೭ ಸೆಂ.ಮೀ. ನಷ್ಟು ಉದ್ದವಾಗಿ, ತೆಳುವಾಗಿದೆ. ಗುಂಪಾಗಿ ಬೆಳೆಯುವ ಹೂವು ಬಿಳಿ ಬಣ್ಣದಿಂದ ಕೂಡಿದೆ. ಹಣ್ಣು ೧–೨ ಸೆಂ.ಮೀ. ನಷ್ಟು ಉದ್ದವಾಗಿ, ಮೃದುವಾಗಿದೆ. ಈ ದ್ರವ್ಯವು ಹೂವನ್ನು ಬೇಸಿಗೆ ಕಾಲದಲ್ಲಿ ಮತ್ತು ಹಣ್ಣನ್ನು ಮಳೆಗಾಲದಲ್ಲಿ ಬಿಡುತ್ತದೆ. ಸಾಮಾನ್ಯವಾಗಿ ಭಾರತದೆಲ್ಲೆಡೆ ಬೆಳೆಯುವ ಈ ದ್ರವ್ಯವು ಹಿಮಾಲಯ, ಅಸ್ಸಾಂ, ಮಣಿಪುರ, ಭೂತಾನ್, ಸುಮಾತ್ರ, ಮಲೇಶಿಯಾ, ಗುಜರಾಜ್ ಪ್ರದೇಶಗಳಲ್ಲಿ ಹೆಚ್ಚಾಗಿ ಬೆಳೆಯುತ್ತದೆ.

ವಿಧಗಳು : ರಾಜ ನಿಘಂಟುಕಾರನ ಪ್ರಕಾರ ಅಗರುವಿನಲ್ಲಿ ನಾಲ್ಕು ಬಗೆಗಳಿಗೆ

೧. ಕೃಷ್ಣಾಗರು ೨. ಕಾಸ್ಥಾಗರು

೩. ದಾಹಾಗಳು ೪. ಮಾಂಗಲ್ಯಾಗರು

ಇದರಲ್ಲಿ ನಾಲ್ಕನೇ ಬಗೆಯು ಒಳ್ಳೆಯ ಗುಣದಿಂದ ಕೂಡಿದೆ.

### *ಉಪಯುಕ್ತ ಅಂಗಗಳು*

* ಒಳತೊಗಟೆ * ಎಣ್ಣೆ

* ಆಳ್ವಾಸ್ ಆಯುರ್ವೇದಿಕ್ ಮೆಡಿಕಲ್ ಕಾಲೇಜು, ಮೂಡಬಿದರೆ, ಮಂಗಳೂರು.





### *ದ್ರವ್ಯದ ಗುಣಧರ್ಮಗಳು*

ರಸ : ಕಟು, ತಿಕ್ತ

ಗುಣ : ಲಘು, ತೀಕ್ಷ್ಣ

ವೀರ್ಯ : ಉಷ್ಣ

ವಿಪಾಕ : ಕಟು

ಕರ್ಮ : ವಾತಕಫಹರ, ರಸಾಯನ, ತ್ವಚ್ಯ

*'ಅಗರೂಷ್ಣಂ ಕಟು ತ್ವಚ್ಯಂ ತಿಕ್ತಂ ತೀಕ್ಷ್ಣಂಚ ಪಿತ್ತಲಂ ।*
*ಲಘುಕರ್ಣಾಕ್ಷಿರೋಗಘ್ನಂ ಶೀತವಾತ ಕಫಪ್ರಣುತ್ ॥*

(ಭಾವಪ್ರಕಾಶ)

ಅಗರು ಕಟು, ತಿಕ್ತ ರಸದಿಂದ ಕೂಡಿದೆ. ಲಘು, ತೀಕ್ಷ್ಣ ಗುಣದಿಂದ ಕೂಡಿದೆ. ಉಷ್ಣವೀರ್ಯದಿಂದ ಕೂಡಿದೆ. ತ್ವಚಕ್ಕೆ ಒಳ್ಳೆಯದು, ಪಿತ್ತಹರವಾಗಿದೆ. ಕಣ್ಣು ಕಿವಿ ರೋಗಗಳನ್ನು ನಿವಾರಿಸುತ್ತದೆ, ವಾತಕಫರೋಗ ನಿವಾರಿಸುತ್ತದೆ.

### *ಔಷಧಿ ಪ್ರಮಾಣ*

ಚೂರ್ಣ : ಅಗರ್ವಾದಿ ತೈಲ

ಕಷಾಯ : ಸತ್ಯಾದಿ ಚೂರ್ಣ

### *ಔಷಧೀಯ ಉಪಯೋಗಗಳು*

* ಅಗರು ಮತ್ತು ಅಗಲಶುಂಠಿಯ ಕಷಾಯ ಸೇವನೆಯಿಂದ ಪ್ರಮೇಹ ರೋಗ ನಿವಾರಣೆ.
* ಅಗರು ಚೂರ್ಣವನ್ನು ಜೇನಿನೊಂದಿಗೆ ಬೆರೆಸಿ ಸೇವಿಸುವುದರಿಂದ ಕೆಮ್ಮುರೋಗ ಪರಿಹಾರವಾಗುತ್ತದೆ.
* ದದ್ರು ಕುಷ್ಠಕ್ಕೆ ಅಗರು ಎಣ್ಣೆಯನ್ನು ಹಚ್ಚುವುದು.
* ಅಗರು ಉಪಯೋಗಿಸಿ ಧೂಮ ಮಾಡುವುದರಿಂದ ಶ್ವಾಸರೋಗ ದೂರವಾಗುತ್ತದೆ.
* ಅಗರು ಹಚ್ಚುವುದರಿಂದ ದೇಹದ ದುರ್ವಾಸನೆ ಗಾಯ, ಚರ್ಮತೊಂದರೆ ನಿವಾರಣೆ.
* ಅಸ್ತಮಾ ರೋಗದಿಂದ ಬಳಲುತ್ತಿರುವವರು ೧–೨ ಬಿಂದು ಅಗರು ಎಣ್ಣೆಯನ್ನು ವೀಳ್ಯದೆಲೆಗೆ ಹಚ್ಚಿ ಅದನ್ನು ಸೇವಿಸುವುದು.
* ಅಗರು ಚೂರ್ಣ ಸೇವನೆಯು ಚಳಿಯಿಂದ ಕೂಡಿದ ಜ್ವರಕ್ಕೆ ಒಳ್ಳೆಯ ಔಷಧಿ.
* ಅಗರು ಮತ್ತು ಚಂದನದ ಲೇಪವನ್ನು ಹಚ್ಚುವುದರಿಂದ ಊತರೋಗ ದೂರವಾಗುತ್ತದೆ.
* ಅಗರನ್ನು ರಸಾಯನವಾಗಿ ಉಪಯೋಗಿಸುತ್ತಾರೆ.

❑

## ಹಲ್ಲುಗಳ ರಕ್ಷಣೆಗೆ

ಸುಮಾರು ಇನ್ನೂರೈವತ್ತು ಗ್ರಾಂ ರಾಗಿಯನ್ನು ತೆಗೆದುಕೊಂಡು ಚೊಕ್ಕಟ ಮಾಡಿ ಸ್ವಲ್ಪ ಸ್ವಲ್ಪ ರಾಗಿಯನ್ನು ಒಂದು ಪಾತ್ರೆಯಲ್ಲಿ ಹಾಕಿ ಚೆನ್ನಾಗಿ ಸೀದು ಕಪ್ಪುವಾಗುವವರೆಗೂ ಹುರಿಯಿರಿ. ಹೀಗೆ ತಯಾರಿಸಿದ ರಾಗಿಯ ಇದ್ದಿಲನ್ನು ಒರಳಿನಲ್ಲಿ ಕುಟ್ಟಿ ಪುಡಿಮಾಡಿ ಜರಡಿ ಹಿಡಿಯಿರಿ. ಮೆಣಸು, ಜೀರಿಗೆ, ಓಮು ಹುರಿದ ಕೊತ್ತಂಬರಿ ಬೀಜವು ಸೇರಿದಂತೆ ಈ ಪ್ರತಿಯೊಂದು ಪದಾರ್ಥವನ್ನು ಒಂದು ಟೀ ಚಮಚದಷ್ಟು ತೆಗೆದುಕೊಂಡು, ನುಣ್ಣಗೆ ಪುಡಿಮಾಡಿ ಶೋಧಿಸಿದನಂತರ ರಾಗಿ ಇದ್ದಿಲಿನ ಪುಡಿಗೆ ಬೆರಸಿ ಸುಮಾರು ಒಂದು ಅಂಗುಲ ಉದ್ದವಾದ ಒಣ ಶುಂಠಿ ತುಂಡು ಎರಡು ಅರಿಶಿನದ ಕೊಂಬು ಒಂದು ಗೋಲಿ ಗಾತ್ರ ಸುಟ್ಟ ಪಟಕ ಮತ್ತು ಒಂದು ಚಿಟಿಕೆ ಪೊಟಾಸಿಯಂ ಪರ್ ಮ್ಯಾಂಗನೇಟ್ ಇವುಗಳನ್ನು ಒರಳಿನಲ್ಲಿ ನುಣ್ಣಗೆ ಅರೆದು ಮೇಲಿನ ಮಿಶ್ರಣಕ್ಕೆ ಸೇರಿಸಿ ಇದರೊಂದಿಗೆ ಮೂರು ಟೀ ಚಮಚ ಅಡಿಗೆ ಉಪ್ಪಿನ ಪುಡಿ ಮತ್ತು ಮೂರು ಟೀ ಚಮಚ ಅಡಿಗೆ ಸೋಡ ಮಿಶ್ರಮಾಡಿ ಒಂದು ಬಿಲ್ಲೆ ಕರ್ಪೂರ ಅಂಗೈಯಲ್ಲಿ ತೆಗೆದುಕೊಂಡು ಚೆನ್ನಾಗಿ ತೀಡಿ ಮೇಲಿನ ಮಿಶ್ರಣದೊಂದಿಗೆ ಚೆನ್ನಾಗಿ ಬೆರಸಿ ಹೀಗೆ ತಯಾರಿಸಿದ ಹಲ್ಲುಪುಡಿಯನ್ನು ಒಂದು ಗಾಜಿನ ಸೀಸೆಯಲ್ಲಿ ತುಂಬಿಟ್ಟುಕೊಂಡು ಬಳಸಿರಿ. ಈ ಹಲ್ಲು ಪುಡಿಯನ್ನು ಪ್ರತಿದಿನ ಬಳಸುವುದರಿಂದ ಹಣ ಉಳಿತಾಯವಾಗುವುದು ಹಲ್ಲುಗಳ ಸವಕಳಿ ನಿಲ್ಲುವುದು ವಸಡಿನಿಂದಾಗುವ ರಕ್ತಸ್ರಾವ ನಿಲ್ಲುವುದು ಮತ್ತು ಬಾಯಿಯ ದುರ್ಗಂಧ ನಿವಾರಣೆಯಾಗುವುದು. ಇದು ಅತ್ಯುತ್ತಮ ದಂತ ಚೂರ್ಣ.

ಶ್ರೀ ಸಿದ್ಧಗಂಗಾ ಮಠ, ತುಮಕೂರು

## ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ

| ಕ್ರ.ಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೧೯೮. | ಶ್ರೀ ರಾಜಶೇಖರಯ್ಯ<br>ಬೆಂಗಳೂರು | ೧,೦೦೦.೦೦ |
| ೧೯೯. | ಶ್ರೀ ಕೆ.ಎ. ವೀರಭದ್ರಪ್ಪ ಮತ್ತು ಕುಟುಂಬ<br>ತುಮಕೂರು | ೫,೦೦೧.೦೦ |
| ೨೦೦. | ಶ್ರೀ ಎನ್.ಕೆ. ರಾಮಪ್ಪ<br>ತುಮಕೂರು | ೧೦,೦೦೦.೦೦ |
| ೨೦೧. | ಶ್ರೀ ಜಿ.ಹೆಚ್. ಗಂಗಾಧರಯ್ಯ<br>ದೇವರಾಯಪಟ್ಣ | ೧,೦೦೦.೦೦ |
| ೨೦೨. | ಶ್ರೀ ಸೋಮಶೇಖರಯ್ಯ<br>ಕೋಲಾರ | ೧೨,೩೪೫.೦೦ |
| ೨೦೩. | ಶ್ರೀ ಓಬಳೇಶ್<br>ಪಾವಗಡ | ೧,೦೦೦.೦೦ |
| ೨೦೪. | ಶ್ರೀ ಎಂ.ಎಸ್. ಸೋಮಶೇಖರಯ್ಯ<br>ಬೆಂಗಳೂರು | ೨೦,೦೦೦.೦೦ |
| ೨೦೫. | ಶ್ರೀ ಎನ್.ಎಂ. ಪ್ರಕಾಶ್<br>ಬೆಂಗಳೂರು | ೫,೦೦೦.೦೦ |
| ೨೦೬. | ಶ್ರೀ ರಾಜೇಂದ್ರ ಮನ್ನೂರ್<br>ಬೆಂಗಳೂರು | ೨,೦೦೧.೦೦ |
| ೨೦೭. | ಶ್ರೀ ಬಿ.ಆರ್. ಭದ್ರೇಶ್<br>ಬೆಂಗಳೂರು | ೨,೦೦೦.೦೦ |
| ೨೦೮. | ಶ್ರೀ ಎಂ. ಬಸವರಾಜು<br>ಭದ್ರಾವತಿ | ೫,೦೦೦.೦೦ |
| ೨೦೯. | ಶ್ರೀ ಸದಾನಂದಯ್ಯ<br>ಗಂಜಲಗುಂಟೆ | ೫,೦೦೦.೦೦ |
| ೨೧೦. | ಶ್ರೀ ಬಿ. ಗಂಗಯ್ಯ<br>ಶ್ರೀನಗರ | ೫೦೦.೦೦ |
| ೨೧೧. | ಶ್ರೀ ಶಿವಕುಮಾರ್ ಪಿ. ಬಿರಾದಾರ್<br>ಮಂಟಲ್ | ೨೦,೦೦೨.೦೦ |
| ೨೧೨. | ಮಹಿಳಾ ಸೇವಾ ಮಂಡಳಿ<br>ಬೆಂಗಳೂರು | ೧೧,೦೦೦.೦೦ |
| ೨೧೩. | ಶ್ರೀ ಎನ್. ಬಸಪ್ಪ<br>ಮರೂರು | ೧,೦೦೦.೦೦ |
| ೨೧೪. | ಶ್ರೀ ಹೆಚ್. ಗೋವಿಂದಯ್ಯ<br>ಚಿಕ್ಕಮಂಕಲ | ೧,೦೦೦.೦೦ |

| ಕ್ರ.ಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೨೧೫. | ಶ್ರೀ ಜಿ.ಪಿ. ಸದಾಶಿವಯ್ಯ<br>ಬೆಂಗಳೂರು | ೪೫,೦೦೦.೦೦ |
| ೨೧೬. | ಶ್ರೀ ಕಂಬಿ ಲಿಂಗದೇವರು ಮಂಜುನಾಥ<br>ಬೆಂಗಳೂರು | ೫೦,೦೦೦.೦೦ |
| ೨೧೭. | ಶ್ರೀ ಎಸ್. ಶಿವಶಂಕರ<br>ಮೇದಿನಿಮಠ | ೧,೦೦೦.೦೦ |
| ೨೧೮. | ಶ್ರೀ ಚನ್ನಬಸವಯ್ಯ<br>ಮಲ್ಲರಬಾನವಾಡಿ | ೫೦೦.೦೦ |
| ೨೧೯. | ಶ್ರೀ ಹೆಚ್.ಟಿ. ಲಿಂಗಪ್ಪ<br>ಹಾಲನೂರು | ೧,೦೦೧.೦೦ |
| ೨೨೦. | ಶ್ರೀ ಡಿ.ಎನ್. ಶಿವಶಂಕರಯ್ಯ<br>ತುಮಕೂರು | ೨,೦೦೦.೦೦ |
| ೨೨೧. | ಶ್ರೀ ಜಿ.ಬಿ. ಮೃತ್ಯುಂಜಯ<br>ಬಾಚೇನಹಳ್ಳೀ | ೫,೦೦೧.೦೦ |
| ೨೨೨. | ಶ್ರೀ ಮಧು ಸಾಮಂತ್<br>ಶ್ರೀನಗರ | ೫,೦೦೦.೦೦ |
| ೨೨೩. | ಶ್ರೀ ಕೆ. ಕೃಷ್ಣಪ್ಪ<br>ನಾಗಣ್ಣನಪಾಳ್ಯ | ೧,೦೦೦.೦೦ |
| ೨೨೪. | ಶ್ರೀ ಟಿ. ಕುಮಾರಸ್ವಾಮಿ<br>ಮಾದೀಹಳ್ಳಿ | ೫,೦೦೧.೦೦ |
| ೨೨೫. | ಶ್ರೀ ಎಸ್. ಚಂದ್ರಕಲಾ<br>ರಾಮನಗರ | ೧,೫೦೦.೦೦ |
| ೨೨೬. | ಶ್ರೀ ಎಸ್. ಚಂದ್ರಪ್ಪ<br>ಬೆಂಗಳೂರು | ೫,೦೦೧.೦೦ |
| ೨೨೭. | ಶ್ರೀ ಕರಿಸಿದ್ಧಯ್ಯ<br>ತಿಪಟೂರು | ೨,೦೦೦.೦೦ |
| ೨೨೮. | ಶ್ರೀ ಬಿ.ಸಿ. ನಂಜಪ್ಪ<br>ಹಾಸನ | ೧೫,೦೦೦.೦೦ |
| ೨೨೯. | ಶ್ರೀ ಜಿ. ಬಸವೇಶ<br>ಕೊಳ್ಳೇಗಾಲ | ೫೦೦.೦೦ |
| ೨೩೦. | ಶ್ರೀ ಎಸ್.ಆರ್. ಚಿಕ್ಕೇಗೌಡ<br>ಶ್ರೀವಂದನಹಳ್ಳಿ | ೫೦೦.೦೦ |
| ೨೩೧. | ಶ್ರೀಮತಿ ಶಕುಂತಲ ಜಯದೇವ್<br>ಬೆಂಗಳೂರು | ೨೫,೦೦೦.೦೦ |





| ಕ್ರ.ಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೨೩೨. | ಶ್ರೀ ಜಿ. ಗುರುಬಸಪ್ಪ<br>ಬೆಂಗಳೂರು | ೫೦,೦೦೧.೦೦ |
| ೨೩೩. | ಶ್ರೀ ಎಸ್. ಬಸವರಾಜು<br>ಶ್ರೀನಗರ | ೨,೨೦೦.೦೦ |
| ೨೩೪. | ಡಾ. ಶಿವಕುಮಾರಯ್ಯ<br>ತುಮಕೂರು | ೨೨,೨೬೫.೦೦ |
| ೨೩೫. | ಶ್ರೀ ಜಿ. ಗವಿಸಿದ್ಧಯ್ಯ<br>ಶ್ರೀ ಸಿದ್ಧಗಂಗಾಮಠ | ೨೫,೫೫೫.೦೦ |
| ೨೩೬. | ಶ್ರೀ ಎ. ಸಿದ್ಧಪ್ಪ<br>ಹಾಲೇನಹಳ್ಳಿ | ೧,೦೦೫.೦೦ |
| ೨೩೭. | ಶ್ರೀ ಮಂಜುನಾಥ<br>ಬೆಂಗಳೂರು | ೧,೦೦೦.೦೦ |
| ೨೩೮. | ಶ್ರೀ ಕೆ. ಗಂಗೇಗೌಡ<br>ಹಾಸನ | ೧೬,೦೦೦.೦೦ |
| ೨೩೯. | ಶ್ರೀ ವಿ.ಪಿ. ಗಂಗಣ್ಣ<br>ತುಮಕೂರು | ೧,೦೦೦.೦೦ |
| ೨೪೦. | ಶ್ರೀ ಆರ್. ತಿಪ್ಪೇಸ್ವಾಮಿ<br>ಬೆಂಗಳೂರು | ೧೦,೦೦೧.೦೦ |
| ೨೪೧. | ಶ್ರೀ ಎಸ್.ಹೆಚ್. ಜಡಿಯಪ್ಪ<br>ಮೈದಾಳ | ೧,೦೦೫.೦೦ |
| ೨೪೨. | ಶ್ರೀ ಎ.ಎ. ಕುಮಾರಸ್ವಾಮಿ<br>ಮೈಸೂರು | ೧,೦೦೦.೦೦ |
| ೨೪೩. | ಶ್ರೀ ಜಿ. ಶಿವಾನಂದಪ್ಪ<br>ಬೆಂಗಳೂರು | ೧,೦೦೧.೦೦ |
| ೨೪೪. | ಡಾ. ಬಿ.ಎಸ್. ಪರ್ವತರಾಜು<br>ಮೈಸೂರು | ೩೬,೫೦೦.೦೦ |
| ೨೪೫. | ಶ್ರೀ ಎಸ್.ಎಂ. ಮಲ್ಲೇಶಪ್ಪ<br>ಹಾಸನ | ೧,೦೦೦.೦೦ |
| ೨೪೬. | ಶ್ರೀ ಸತ್ಯನಾರಾಯಣ<br>ಚಿಕ್ಕಹೆಜ್ಜಾಜಿ | ೧,೦೦೧.೦೦ |
| ೨೪೭. | ಶ್ರೀ ಸಿ.ಆರ್. ವೀರಭದ್ರಯ್ಯ<br>ದೇವನಹಳ್ಳಿ | ೨,೦೦೦.೦೦ |
| ೨೪೮. | ಶ್ರೀ ಕೆ.ಎನ್. ನಾರಾಯಣರೆಡ್ಡಿ<br>ಕೆ.ಜಿ.ಎಫ್. | ೨,೦೦೦.೦೦ |
| ೨೪೯. | ಶ್ರೀ ಡಿ.ಬಿ. ಚಂದ್ರಶೇಖರಪ್ಪ<br>ಚಿಕ್ಕಪಟ್ಣಗೆರೆ | ೧,೦೦೧.೦೦ |
| ೨೫೦. | ಶ್ರೀ ಬಸವಲಿಂಗಯ್ಯ<br>ಕೊಟ್ಟೂರು | ೧,೦೦೧.೦೦ |

| ಕ್ರ.ಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೨೫೧. | ಶ್ರೀ ಕೆ. ಮುನೇಗೌಡ<br>ಸಿದ್ಧನಾಯಕನಹಳ್ಳಿ | ೨,೦೦೦.೦೦ |
| ೨೫೨. | ಶ್ರೀ ಎಂ.ಜಿ. ಸಿದ್ಧರಾಮಯ್ಯ<br>ತುಮಕೂರು | ೨೦,೯೪೧.೦೦ |
| ೨೫೩. | ಶ್ರೀ ರುದ್ರಯ್ಯ<br>ಕ್ಯಾತ್ಸಂದ್ರ | ೧,೦೦೦.೦೦ |
| ೨೫೪. | ಶ್ರೀ ಎಸ್. ರೇಣುಕಯ್ಯ<br>ಮರೂರು | ೧,೦೦೦.೦೦ |
| ೨೫೫. | ಶ್ರೀ ರತ್ನಪ್ರಭ<br>ತುಮಕೂರು | ೧,೩೦೦.೦೦ |
| ೨೫೬. | ಶ್ರೀ ನಟರಾಜು ಎನ್.ಎಸ್.<br>ಬೆಂಗಳೂರು | ೧,೦೦೮.೦೦ |
| ೨೫೭. | ಶ್ರೀ ಎಸ್.ಸಿ. ಕೆಂಪಯ್ಯ<br>ಬೆಂಗಳೂರು | ೧೦,೨೦೧.೦೦ |
| ೨೫೮. | ಶ್ರೀ ಡಿ.ಎಲ್. ಚಂದ್ರಶೇಖರ್<br>ಬೆಂಗಳೂರು | ೧೦,೦೦೦.೦೦ |
| ೨೫೯. | ಶ್ರೀ ವಿ.ಸಿ. ಪರಮಶಿವಯ್ಯ<br>ಬೆಂಗಳೂರು | ೩,೦೦೦.೦೦ |
| ೨೬೦. | ಶ್ರೀ ರೇಣುಕ ರವಿಶಂಕರ್<br>ಬೆಂಗಳೂರು | ೨,೦೦೧.೦೦ |
| ೨೬೧. | ಶ್ರೀ ನಾಗಶ್ರೀ ನರೇಂದ್ರ<br>ಬೆಂಗಳೂರು | ೧,೦೦೧.೦೦ |
| ೨೬೨. | ಶ್ರೀ ಡಿ.ಎನ್. ರಾಜಶೇಖರ್<br>ಬೆಂಗಳೂರು | ೧,೦೦೦.೦೦ |
| ೨೬೩. | ಶ್ರೀ ಕೆ. ಸುರೇಶ್ ಮತ್ತು ಕುಟುಂಬ<br>ಬೆಂಗಳೂರು | ೧,೦೦೧.೦೦ |
| ೨೬೪. | ಶ್ರೀ ಪುಟ್ಟರೇವಣ್ಣ<br>ಬೆಂಗಳೂರು | ೧,೦೧೦.೦೦ |
| ೨೬೫. | ಶ್ರೀ ಹೆಚ್.ವಿ. ಸಾವಂದಯ್ಯ<br>ಬೆಂಗಳೂರು | ೧,೦೦೦.೦೦ |
| ೨೬೬. | ಶ್ರೀ ಬಿ.ಡಿ. ಮದನ್‌ಕುಮಾರ್<br>ಬಿಲುಗವಲ್ಲಿ | ೫೦೦.೦೦ |
| ೨೬೭. | ಶ್ರೀ ಎಸ್. ನೀಲಕಂಠಪ್ಪ<br>ಹೆಡ್ಡರವಲ್ಲಿ | ೫೦೦.೦೦ |
| ೨೬೮. | ಶ್ರೀ ಪಿ.ಎನ್. ಶಿವರುದ್ರಪ್ಪ<br>ತುಮಕೂರು | ೧,೦೦೦.೦೦ |
| ೨೬೯. | ಶ್ರೀ ಮರುಘೇಶ್ ಹಿರೇಮಠ<br>ಹುಬ್ಬಳ್ಳಿ | ೧,೦೦೧.೦೦ |

| ಕ್ರ.ಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೭೭೦. | ಶ್ರೀ ಹೆಚ್.ಎಂ. ಸಿದ್ಧಪ್ಪ<br>ಹೊನಗನಹಳ್ಳಿ | ೫,೦೦೧.೦೦ |
| ೭೭೧. | ಶ್ರೀ ಮುದ್ಧಪ್ಪ<br>ರಾಮಚಂದ್ರಪುರ | ೧,೨೦೦.೦೦ |
| ೭೭೨. | ಶ್ರೀ ಕೆ.ಎನ್. ವೀರಣ್ಣ<br>ಬೆಂಗಳೂರು | ೧೦,೦೦೦.೦೦ |
| ೭೭೩. | ಶ್ರೀ ಸಂಜೀವಮೂರ್ತಿ<br>ಸಿಂಗಳೀಕಪುರ | ೧,೮೦೧.೦೦ |
| ೭೭೪. | ಶ್ರೀ ತುಳಸೀರಾಮಯ್ಯ<br>ಬೆಂಗಳೂರು | ೧೦,೧೧೦.೦೦ |
| ೭೭೫. | ಶ್ರೀ ಆರ್. ಲಕ್ಷ್ಮಯ್ಯ<br>ಗೋಣಿಪುರ | ೧,೦೦೦.೦೦ |
| ೭೭೬. | ಶ್ರೀ ಜಿ.ಕೆ. ಗಂಗಾಧರ<br>ಬೆಂಗಳೂರು | ೭೦೦.೦೦ |
| ೭೭೭. | ಶ್ರೀ ಎಂ. ಶಿವಕುಮಾರ್<br>ಬೆಂಗಳೂರು | ೫,೧೦೦.೦೦ |
| ೭೭೮. | ಶ್ರೀ ಎಸ್. ರುದ್ರಾರಾಧ್ಯ<br>ಬೆಂಗಳೂರು | ೧,೦೦೦.೦೦ |
| ೭೭೯. | ಶ್ರೀ ಎಸ್. ವಿಶ್ವೇಶ್ವರಯ್ಯ<br>ಗುಬ್ಬಿ | ೧,೦೦೦.೦೦ |
| ೭೮೦. | ಶ್ರೀ ಶಿವಸ್ವಾಮಿ<br>ಗಟ್ಟೀಪುರ | ೨,೦೦೦.೦೦ |
| ೭೮೧. | ಶ್ರೀ ಹೆಚ್.ಹೆಚ್. ಗಂಗಾಧರರಾವ್<br>ಬೆಂಗಳೂರು | ೧,೦೦೦.೦೦ |
| ೭೮೨. | ಶ್ರೀ ಟಿ. ವೆಂಕಟೇಶಯ್ಯ<br>ಬರಗೂರು | ೧,೦೦೧.೦೦ |
| ೭೮೩. | ಶ್ರೀ ಸಿದ್ಧಪ್ಪ<br>ಬೆಂಗಳೂರು | ೧,೦೦೦.೦೦ |
| ೭೮೪. | ಶ್ರೀ ಶಿವಣ್ಣ<br>ಬೆಂಗಳೂರು | ೨,೦೦೦.೦೦ |
| ೭೮೫. | ಶ್ರೀ ಸಿದ್ಧಪ್ಪ<br>ಎಂ. ಗೋನಹಾಳು | ೧,೦೦೧.೦೦ |
| ೭೮೬. | ಶ್ರೀ ಜಗದೀಶ ಯಡಕೋಳ<br>ಮೈಸೂರು | ೩,೦೦೦.೦೦ |
| ೭೮೭. | ಶ್ರೀ ಎಸ್. ಮಧುಸೂದನ<br>ದಾವಣಗೆರೆ | ೧,೦೦೦.೦೦ |
| ೭೮೮. | ಶ್ರೀ ರವಿಶಂಕರ್<br>ಬೆಂಗಳೂರು | ೧,೦೦೧.೦೦ |
| ೭೮೯. | ಶ್ರೀ ಬಸವರಾಜು ಎಂ. ಹಿರೇಮಠ<br>ಬೆಂಗಳೂರು | ೫,೦೦೦.೦೦ |
| ೭೯೦. | ಡಾ॥ ಕೃಪಾ ಬಸವರಾಜು<br>ಬೆಂಗಳೂರು | ೧೦,೦೦೦.೦೦ |
| ೭೯೧. | ಶ್ರೀ ಸಿದ್ಧಗಂಗಪ್ಪ<br>ಹೊಸಪಾಳ್ಯ | ೧,೦೦೦.೦೦ |
| ೭೯೨. | ಶ್ರೀ ಚಂದ್ರಯ್ಯ<br>ಮಲ್ಲಸಂದ್ರ | ೧,೦೦೦.೦೦ |
| ೭೯೩. | ಶ್ರೀ ಶಿವಲಿಂಗಯ್ಯ<br>ತುಮಕೂರು | ೨,೫೦೧.೦೦ |
| ೭೯೪. | ಶ್ರೀ ಪಾಲಾಕ್ಷಪ್ಪ<br>ಬೆಂಗಳೂರು | ೨,೦೦೦.೦೦ |
| ೭೯೫. | ಶ್ರೀ ಬಿ.ಬಿ. ಪಾಲಾಕ್ಷ<br>ಬಾಳ್ಳುಪೇಟೆ | ೧೦,೦೦೧.೦೦ |
| ೭೯೬. | ಶ್ರೀ ಎಂ.ಬಿ. ಸದಾಶಿವಯ್ಯ<br>ತುಮಕೂರು | ೫,೦೦೦.೦೦ |
| ೭೯೭. | ಪ್ರೊ. ಜಿ. ಪರಮೇಶ್ವರಪ್ಪ<br>ಬೆಂಗಳೂರು | ೧,೦೦೦.೦೦ |
| ೭೯೮. | ಶ್ರೀ ಎಂ. ಗಂಗಾಧರಯ್ಯ<br>ಬೆಂಗಳೂರು | ೨,೦೦೦.೦೦ |
| ೭೯೯. | ಶ್ರೀ ಮಂಜುನಾಥ<br>ಬೆಂಗಳೂರು | ೨,೦೦೦.೦೦ |
| ೮೦೦. | ಶ್ರೀ ಎನ್. ಶಿವಗಂಗಯ್ಯ<br>ಮಾದೇನಹಳ್ಳಿ | ೧,೦೦೦.೦೦ |
| ೮೦೧. | ಶ್ರೀ ಸಂದೀಪ್ ಜೆ. ಆಲೂರ್<br>ಬೆಂಗಳೂರು | ೩,೫೦೦.೦೦ |
| ೮೦೨. | ಶ್ರೀ ಕೆ.ಬಿ. ಸಿದ್ಧಲಿಂಗೇಶ್ವರಚಾರ್<br>ಬೆಂಗಳೂರು | ೧,೦೦೦.೦೦ |
| ೮೦೩. | ಶ್ರೀಮತಿ ಯಶೋಧ<br>ಬೆಂಗಳೂರು | ೧,೦೦೦.೦೦ |
| ೮೦೪. | ಶ್ರೀ ಕೆ.ಬಿ. ವಿರೂಪಾಕ್ಷಯ್ಯ<br>ಬೆಂಗಳೂರು | ೫,೦೦೧.೦೦ |
| ೮೦೫. | ಶ್ರೀ ಬಿ.ವಿ. ಮುಳ್ಳಪ್ಪ<br>ಚಿಕ್ಕಮಗಳೂರು | ೧,೦೦೦.೦೦ |
| ೮೦೬. | ಶ್ರೀ ವೇದ ಶಿವಮೂರ್ತಯ್ಯ ಸ್ವಾಮಿ ಆರ್.<br>ಕಟಕೀಹಳ್ಳಿಮಠ, ಗುತ್ತಲ | ೧,೦೦೦.೦೦ |
| ೮೦೭. | ಶ್ರೀ ಜಿ.ಎನ್. ಮೃತ್ಯುಂಜಯ<br>ಬೆಂಗಳೂರು | ೫,೦೦೦.೦೦ |



ದಾನಿಗಳ ಪಟ್ಟಿ

| ಕ್ರ.ಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೮೦೮. | ಶ್ರೀ ಪರಮೇಶ್ವರಪ್ಪ<br>ಬೆಂಗಳೂರು | ೧,೦೦೦.೦೦ |
| ೮೦೯. | ಡಾ. ನಾಗೇಶ್ ಜಿ. ಕವಿ<br>ಬೆಂಗಳೂರು | ೧೨,೫೦೦.೦೦ |
| ೮೧೦. | ಶ್ರೀ ಶಂಕರಪ್ಪ – ತಿಮ್ಮಪ್ಪ ಹಾರನಹಳ್ಳಿ<br>ಹೊಳಗೆರೆ | ೧೧,೦೦೦.೦೦ |
| ೮೧೧. | ಶ್ರೀ ಆರ್.ಬಿ. ಗೋಪಾಲಪ್ಪ<br>ಹೊಸಹಳ್ಳಿ | ೫,೦೦೧.೦೦ |
| ೮೧೨. | ಶ್ರೀ ಬಿ.ವಿ. ವೆಂಕಟೇಶ್<br>ಹೊಸಹಳ್ಳಿ | ೫,೦೦೧.೦೦ |
| ೮೧೩. | ಶ್ರೀ ಸಿ.ಎಂ. ಸ್ವಾಮಿ ಮತ್ತು ಗಂಗಮ್ಮ<br>ಕಮ್ಮನಹಳ್ಳಿ | ೨,೦೦೦.೦೦ |
| ೮೧೪. | ಶ್ರೀ ಕೆ.ಸಿ. ಚಂದ್ರಶೇಖರಯ್ಯ<br>ಕುಂದರನಹಳ್ಳಿ | ೧,೦೦೧.೦೦ |
| ೮೧೫. | ಶ್ರೀ ಕೆ.ಎಸ್. ಮಹದೇವಣ್ಣ<br>ಕುಂದರನಹಳ್ಳಿ | ೧,೦೦೧.೦೦ |
| ೮೧೬. | ಶ್ರೀ ಕೆ.ಆರ್. ಸಿದ್ಧಲಿಂಗಯ್ಯ<br>ಕುಂದರನಹಳ್ಳಿ | ೧,೦೦೧.೦೦ |
| ೮೧೭. | ಶ್ರೀ ಬಿ. ವೀರಭದ್ರಯ್ಯ<br>ಮುತ್ತಸಂದ್ರ | ೧,೦೦೧.೦೦ |
| ೮೧೮. | ಶ್ರೀ ಸುಗ್ಗನಹಳ್ಳಿ ಬಸಮ್ಮ ಶಿವಲಿಂಗಯ್ಯ ಚಾರಿಟಬಲ್<br>ಟ್ರಸ್ಟ್, ಬೆಂಗಳೂರು | ೨೦,೦೦೦.೦೦ |
| ೮೧೯. | ಶ್ರೀ ಟಿ. ಚಂದ್ರಶೇಖರಯ್ಯ<br>ತುಮಕೂರು | ೩,೦೦೦.೦೦ |
| ೮೨೦. | ಶ್ರೀ ಬಿ. ರಾಜಶೇಖರಯ್ಯ<br>ತುಮಕೂರು | ೧೮,೨೫೦.೦೦ |
| ೮೨೧. | ಶ್ರೀ ಕೆ.ಸಿ. ರೂಪ<br>ಬೆಂಗಳೂರು | ೫,೦೦೧.೦೦ |
| ೮೨೨. | ಶ್ರೀ ಕೆ.ಎಸ್. ದೊಡ್ಡಯ್ಯ<br>ಕಡಬಗೆರೆ | ೧೦,೦೦೧.೦೦ |
| ೮೨೩. | ಶ್ರೀ ಪಿ.ಐ. ಸೋಮಶೇಖರ್<br>ಬೆಂಗಳೂರು | ೭೦,೦೦೦.೦೦ |
| ೮೨೪. | ಡಾ. ಎಂ.ಎನ್. ಚನ್ನಬಸಪ್ಪ<br>ಎಸ್.ಐ.ಟಿ. ತುಮಕೂರು. | ೩೬,೫೦೦.೦೦ |
| ೮೨೫. | ಶ್ರೀ ಎಸ್.ಪಿ. ರುದ್ರೇಶಯ್ಯ<br>ಉದೇವಾರ | ೧,೫೦೦.೦೦ |
| ೮೨೬. | ಶ್ರೀಮತಿ ಲಲಿತಮಣಿ<br>ತುಮಕೂರು | ೧,೦೦೦.೦೦ |
| ೮೨೭. | ಶ್ರೀ ಕೆ.ಸಿ. ಬಸವರಾಜು<br>ಶ್ರೀನಿವಾಸಪುರ | ೨,೦೦೦.೦೦ |
| ೮೨೮. | ಶ್ರೀ ಎಂ. ಶಿವಣ್ಣ<br>ಬೆಂಗಳೂರು | ೩೦,೦೦೦.೦೦ |
| ೮೨೯. | ಶ್ರೀ ಎಸ್. ಮಲ್ಲೇಶಪ್ಪ<br>ಬಿಸಕೆರೆ | ೧೦,೦೦೦.೦೦ |
| ೮೩೦. | ಶ್ರೀ ಸಿ. ಬಸವರಾಜಪ್ಪ<br>ಬೆಂಗಳೂರು | ೫,೧೦೦.೦೦ |
| ೮೩೧. | ಶ್ರೀ ಪ್ರಣವ್ ಎಸ್. ಕೋ ದಂಡಪ್ರಳ<br>ಧಾರವಾಡ | ೫,೦೦೧.೦೦ |
| ೮೩೨. | ಶ್ರೀ ಚಂದ್ರಶೇಖರಯ್ಯ ಅರ್ಜುನ<br>ಬೆಟ್ಟಹಳ್ಳಿ | ೧,೦೦೦.೦೦ |

*(ಮುಂದುವರೆಯುತ್ತದೆ)*

## ಶ್ರೀವಾಣಿ

ಸುಮಾರು ಎಂಟುನೂರು ವರ್ಷಗಳ ಹಿಂದೆ ಕರ್ನಾಟಕದಲ್ಲಿ ಜನ್ಮತಾಳಿದ ಬಸವಣ್ಣನವರು ಚಿಕ್ಕವಯಸ್ಸಿ ನಿಂದಲೂ ಉದಾತ್ತ ಮನೋಭಾವವುಳ್ಳವರಾಗಿ ದಿನಚರಿಯ ಸಾಮಾಜಿಕ ಜೀವನದಲ್ಲಿ ನಡೆಯುತ್ತಿರುವ ಅನ್ಯಾಯಗಳ ವಿರುದ್ಧ ಪ್ರಬಲ ಹೋರಾಟ ನಡೆಸಿದ ಧೀಮಂತ ವ್ಯಕ್ತಿ. ಧರ್ಮದ ಹೆಸರಿನಲ್ಲಿ ಪ್ರಚಲಿತವಾಗಿದ್ದ ಶೋಷಣೆ, ಮೇಲು ಕೀಳುಗಳೆಂಬ ಕಲ್ಪನೆ, ದೀನದಲಿತರ ದಮನ ಮುಂತಾದ ಅನ್ಯಾಯಗಳನ್ನು ಹೋಗಲಾಡಿಸಲು ತಮ್ಮ ಜೀವನವನ್ನೇ ಮುಡಿಪಾಗಿಟ್ಟರು. ಶ್ರೇಷ್ಠವಾದ ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿದು ಅವುಗಳನ್ನು ಅಳವಡಿಸಿಕೊಂಡು ಎಲ್ಲ ವ್ಯಕ್ತಿಯೂ ಉದ್ಧಾರವಾಗುವುದು ಸಾಧ್ಯವೆನ್ನುವ ಆತ್ಮವಿಶ್ವಾಸವನ್ನು ಮೂಡಿಸಿ ಸಕಲರನ್ನು ಉದ್ಧಾರ ಮಾಡಿದ ಮಹಾತ್ಮ. ಒಟ್ಟಿನಲ್ಲಿ ಶ್ರೇಷ್ಠವರ್ಗದ ಮಾನವತಾವಾದಿಯಾಗಿ ಜಗತ್ತಿನ ಮನುಕುಲದ ಸಮಸ್ಯೆಗಳನ್ನು ಪರಿಹರಿಸಲು ಹೆಣಗಾಡಿದ ಮಹಾನುಭಾವರು ಅವರು.

RNI No. 17139/69 "Siddaganga" Monthly - Postal Reg. No. L2/RNP/385/TMR/2015-17

ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಶೇ. 97.44 ಅಂಕಗಳನ್ನು ಪಡೆದ ಶ್ರೀ ಸಿದ್ಧಗಂಗಾ ಆಂಗ್ಲ ಪ್ರೌಢಶಾಲಾ ವಿದ್ಯಾರ್ಥಿನಿ ಕು. ಎ.ಆರ್. ಪೂಜಾ ಇವರಿಗೆ ಪೈ ಇಂಟರ್‌ನ್ಯಾಷನಲ್ ಎಲೆಕ್ಟ್ರಾನಿಕ್ಸ್ ಲಿ., ಮಾಲೀಕರಾದ ಶ್ರೀ ರಾಜಕುಮಾರ್ ಪೈರವರು 5000/– ರೂಗಳ ಪ್ರತಿಭಾ ಪುರಸ್ಕಾರವನ್ನು ಶ್ರೀ ಶ್ರೀಗಳವರ ಅಮೃತಹಸ್ತದಿಂದ ಪುರಸ್ಕರಿಸಲಾಯಿತು.

ಶ್ರೀಮಠದ ವಿದ್ಯಾರ್ಥಿಗಳಿಗೆ ಉಚಿತ ನೋಟ್‌ಪುಸ್ತಕಗಳನ್ನು ವಿತರಿಸಿದ ಪೈ ಇಂಟರ್‌ನ್ಯಾಷನಲ್ ಎಲೆಕ್ಟ್ರಾನಿಕ್ಸ್ ಲಿ., ಮಾಲೀಕರಾದ ಶ್ರೀ ರಾಜಕುಮಾರ್ ಪೈ ಹಾಗೂ ಅವರ ಕುಟುಂಬ ವರ್ಗದವರಿಂದ ಪೂಜ್ಯ ಶ್ರೀ ಶ್ರೀಗಳವರಿಗೆ ಭಕ್ತಿಸಮರ್ಪಣೆ.

ತುಮಕೂರಿನ ಅಶೋಕ ರಸ್ತೆಯಲ್ಲಿ ಸೂರ ಜ್ಯುಯಲರ್ಸ್ ನೂತನ ಮಳಿಗೆಯನ್ನು ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರಸ್ವಾಮೀಜಿಯವರು ಉದ್ಘಾಟಿಸಿದರು. ಮಾಲೀಕರಾದ ಅರ್ಜುನ್, ಎಸ್.ಆರ್. ಶ್ರೀಧರಮೂರ್ತಿ ಇತರರು ಹಾಜರಿದ್ದರು.

ಪೈ ಇಂಟರ್‌ನ್ಯಾಷನಲ್ ಎಲೆಕ್ಟ್ರಾನಿಕ್ಸ್ ಲಿ., ಮಾಲೀಕರಾದ ಶ್ರೀ ರಾಜಕುಮಾರ್ ಪೈ ಹಾಗೂ ಶ್ರೀಮತಿ ಮೀನಾ ರಾಜ್‌ಕುಮಾರ್ ಪೈ ಇವರಿಗೆ ಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಾದ.

ಪೂಜ್ಯ ಶ್ರೀ ಶ್ರೀಗಳವರೊಂದಿಗೆ ಪೈ ಇಂಟರ್‌ನ್ಯಾಷನಲ್ ಎಲೆಕ್ಟ್ರಾನಿಕ್ಸ್ ಲಿ., ಮಾಲೀಕರಾದ ಶ್ರೀ ರಾಜಕುಮಾರ್ ಪೈ, ಶ್ರೀಮತಿ ಮೀನಾ ರಾಜ್‌ಕುಮಾರ್ ಪೈ ಹಾಗೂ ಕುಟುಂಬ ವರ್ಗದವರು.

ಶ್ರೀಮಠದ ವಿದ್ಯಾರ್ಥಿಗಳೊಂದಿಗೆ ಪೈ ಇಂಟರ್‌ನ್ಯಾಷನಲ್ ಎಲೆಕ್ಟ್ರಾನಿಕ್ಸ್ ಲಿ., ಮಾಲೀಕರಾದ ಶ್ರೀ ರಾಜಕುಮಾರ್ ಪೈ ಹಾಗೂ ಸಹೋದರರು